# ಕುವೆಂಪು ಕಾದಂಬರಿಗಳಲ್ಲಿನ ಮಲೆನಾಡಿನ ಪರಿಸರ ಮತ್ತು ಇಂದಿನ ಮಲೆನಾಡಿನ ಪರಿಸರ

ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ

ಹಂಪಿ

ಇವರಿಗೆ ಸಲ್ಲಿಸಿದ ಪ್ರಬಂಧ


ಸಂಶೋಧಕರು: ಸುಷ್ಮಾರಾಣಿ . ಎಂ

ಮಾರ್ಗದರ್ಶಕರು: ಡಾ. ಎಲ್.ಸಿ. ಸುಮಿತ್ರ

ಕುವೆಂಪು ಕನ್ನಡ ಅಧ್ಯಯನ ಕೇಂದ್ರ ,

ಕುಪ್ಪಳಿ ,

ಕನ್ನಡ ವಿಶ್ವವಿದ್ಯಾಲಯ ,

ಹಂಪಿ

# ಕುವೆಂಪು ಕಾದಂಬರಿಗಳಲ್ಲಿನ ಮಲೆನಾಡಿನ ಪರಿಸರ ಮತ್ತು ಇಂದಿನ ಮಲೆನಾಡಿನ ಪರಿಸರ

180

180

ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ

ಹಂಪಿ

ಇವರಿಗೆ ಸಲ್ಲಿಸಿದ ಪ್ರಬಂಧ

ಸಂಶೋಧಕರು: ಸುಷ್ಮಾರಾಣಿ . ಎಂ

ಮಾರ್ಗದರ್ಶಕರು: ಡಾ. ಎಲ್.ಸಿ. ಸುಮಿತ್ರ

ಕುವೆಂಪು ಕನ್ನಡ ಅಧ್ಯಯನ ಕೇಂದ್ರ ,

ಕುಪ್ಪಳಿ ,

ಕನ್ನಡ ವಿಶ್ವವಿದ್ಯಾಲಯ ,

ಹಂಪಿ

# ದೃಢೀಕರಣ ಪತ್ರ

ಸುಷ್ಮಾರಾಣಿ .ಎಂ ಅವರು ಕುವೆಂಪು ಕಾದಂಬರಿಗಳಲ್ಲಿನ ಮಲೆನಾಡ ಪರಿಸರ ಮತ್ತು ಇಂದಿನ ಮಲೆನಾಡ ಪರಿಸರ ಎಂಬ ಶೀರ್ಷಿಕೆಯ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಕೇಂದ್ರಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದಾರೆ.

ಮಾರ್ಗದರ್ಶಕರು

ಡಾ|| ಎಲ್.ಸಿ. ಸುಮಿತ್ರ
ಕನ್ನಡ ಪ್ರಾಧ್ಯಾಪಕರು,
ತುಂಗಾ ಮಹಾವಿದ್ಯಾಲಯ,
ತೀರ್ಥಹಳ್ಳಿ-577432.

ಡಾ. ಎಲ್.ಸಿ. ಸುಮಿತ್ರ
ಪ್ರಾಧ್ಯಾಪಕರು

ನಾನು ಈ ಪ್ರಬಂಧವನ್ನು ಇನ್ನೆಲ್ಲೂ ಪ್ರಕಟಿಸಿಲ್ಲ.

ಸುಷ್ಮಾರಾಣಿ .ಎಂ

# ಪರಿವಿಡಿ

## ಕುವೆಂಪು ಕಾದಂಬರಿಗಳಲ್ಲಿನ ಮಲೆನಾಡಿನ ಪರಿಸರ ಮತ್ತು ಇಂದಿನ ಮಲೆನಾಡಿನ ಪರಿಸರ

## 1. ಅಧ್ಯಯನದ ಉದೇಶ ,ವ್ಯಾಪ್ತಿ ಮತ್ತು ಮಿತಿಗಳು :

ಕುವೆಂಪು ಕೃತಿಗಳಲ್ಲಿ ಚಿತ್ರಿತವಾಗಿರುವ ಮಲೆನಾಡಿನ ಪರಿಸರ ಇಪ್ಪತ್ತನೆಯ ಶತಮಾನದ 4 ಧಶಕಗಳಲ್ಲಿ ಅವರು ನೋಡಿದ ಮಲೆನಾಡಿನ ಪರಿಸರ ಪಶ್ಚಿಮ ಘಟ್ಟಗಳು ಮಳೆಯ ಕಾಡುಗಳನ್ನು ಹೊಂದಿವೆ. ಜೈವಿಕ ವೈವಿಧ್ಯದ ದೃಷ್ಟಿಯಿಂದ ಈ ಉಷ್ಣವಲಯದ ಮಳೆಕಾಡುಗಳು ಜಗತ್ತಿನಲ್ಲಿ ಅತ್ಯಂತ ಶ್ರೀಮಂತವಾಗಿವೆ. ನಮ್ಮ ದೇಶದಲ್ಲಿ ಪ್ರಪಂಚದ ಒಟ್ಟು ಶೇಕಡ 8 ರಷ್ಟು ಜೈವಿಕ ವೈವಿಧ್ಯವನ್ನು ತನ್ನೊಳಗೆ ಒಳಗೊಂಡಿದೆ. ಈ ನಿಟ್ಟಿನಲ್ಲಿ ಭಾರತ ಹತ್ತನೆಯ ಸ್ಥಾನದಲ್ಲಿದೆ. ಅದರಲ್ಲಿ ಪಶ್ಚಿಮ ಘಟ್ಟಗಳ ಪಾಲು ಬಹು ಹಿರಿದು.

ಪ್ರಪಂಚದಲ್ಲಿ ಅಸಾಧಾರಣ ಜೈವಿಕ ವೈವಿಧ್ಯ ಘಟಕಗಳೆಂದು ಗುರುತಿಸಲ್ಪಟ್ಟ 18 ಸ್ಥಳಗಳಲ್ಲಿ ಭಾರತದ ಎರಡು ಪ್ರದೇಶಗಳು ಸ್ಥಾನಪಡೆದಿವೆ. ಅವುಗಳಲ್ಲಿ ಒಂದು ಹಿಮಾಲಯವಾದರೆ ಮತ್ತೊಂದು ನಮ್ಮ ಪಶ್ಚಿಮಘಟ್ಟಗಳು.

ಪಶ್ಚಿಮಘಟ್ಟಗಳ ಅರಣ್ಯಪ್ರದೇಶ ಅನನ್ಯ ಸಸ್ಯ, ಪ್ರಾಣಿ ಸಂಕುಲದ ಆಶ್ರಯತಾಣ ಇಲ್ಲಿನ ಕಾಡುಗಳಲ್ಲಿದ್ದ ಅಪರೂಪದ ಜೀವವೈವಿಧ್ಯ ನಾಗರಿಕ ಜಗತ್ತಿನ ಅರಿವಿಗೆ ಬಾರದಂತೆ ಅವರಅಗತ್ಯಗಳನ್ನು ತೀರಿಸುತ್ತಲೆ ಅಳಿಸಿ ಹೋಗುತ್ತಿರುವುದು ದುಸ್ತರದ ಸಂಗತಿ ಪರಿಸ್ಥಿತಿ ಹೀಗೆ ಮುಂದುವರಿದರೆ ಈಗಾಗಲೆ ಕಾಡುಗಳಲ್ಲಿ ಅಳಿವಿನಂಚಿನಲ್ಲಿರುವ ಎಷ್ಟೋ ಸಸ್ಯ ಹಾಗೂ ಪ್ರಾಣಿ ಪ್ರಬೇಧಗಳು ನಾಶಹೊಂದುತ್ತವೆ.

ಒಂದು ಶತಮಾನದ ಹಿಂದೆ ಪಶ್ಚಿಮ ಘಟ್ಟಗಳಲ್ಲಿ ಕಂಡುಬರುತ್ತಿದ್ದ ಪ್ರಾಕೃತಿಕ ಸಂಪತ್ತು ಇಂದು ಬದಲಾದ ಜೀವನ ಕ್ರಮದಿಂದಾಗಿ ಕ್ಷೀಣಿಸುತ್ತಿದೆ. ಇದರಿಂದಾಗುವ ಅಪಾಯ ಮತ್ತು ಪರಿಸರದ ಮೇಲಾಗುವ ಅಪಾರವಾದ ಹಾನಿಯನ್ನು ಕೈಲಾದ ಮಟ್ಟಿಗೆ ತಡೆಗಟ್ಟಲು ಇಲ್ಲಿನ ಜನಸಮುದಾಯದಲ್ಲಿ ಕಾಳಜಿಮೂಡಿಸುವ ಸಲುವಾಗಿ ನನ್ನ ಅಧ್ಯಾಯನ ಸೀಮಿತವಾಗಿದೆ.

ಈ ಪರಿಸರ ಅಧ್ಯಯನಕ್ಕೆ ಕುವೆಂಪುರವರ ಕೃತಿಗಳಲ್ಲಿ ಚಿತ್ರಿತವಾಗಿರುವ ಮಲೆನಾಡಿನ ಪರಿಸರವನ್ನು ಒಂದು authenticated ದಾಖಲೆಯಂತೆ ಬಳಸಿಕೊಂಡಿದ್ದೇನೆ. ಈಮೂಲಕ ಅಂದಿನ ಮಲೆನಾಡಿನ ಪರಿಸರವನ್ನು ಅಭ್ಯಾಸಿಸುವುದು ನನ್ನ ಅದ್ಯಯನದ ಉದ್ದೇಶಗಳಲ್ಲೊಂದು.

ಕುವೆಂಪು ಚಿತ್ರಿಸಿರುವುದು ಜೀವವೈವಿದ್ಯದಿಂದ ಕೂಡಿರುವ ಮಳೆಕಾಡು. ತುಂಗಾ ನದಿಗೆ ಸೇತುವೆಯೂ ಇಲ್ಲದೆ ಇದ್ದ ಕಾಲದಲ್ಲಿ ಮಲೆನಾಡು ಈಗಿನಂತೆ ಆಧುನಿಕತೆಯ ದಾಳಿಗೆ ತುತ್ತಾಗಿರಲಿಲ್ಲ. ಸಹಜವಾಗಿದ್ದ ಕಾಡು ಮತ್ತು ಸಮೃದ್ಧವಾಗಿದ್ದ ಕಾಡು ಪ್ರಾಣಿಗಳು ವೈವಿಧ್ಯ ಮಯವಾಗಿದ್ದ ಸಸ್ಯ ಪರಿಸರ ಅಂದಿನ ಮಲೆನಾಡಿನಲ್ಲಿತ್ತು.

ಇಂದು ಆಧುನಿಕ ಕೃಷಿ ಪದ್ದತಿ ಮತ್ತು ಆಧುನಿಕ ಜೀವನ ಶೈಲಿಯ ಮುಗಿಯದ ಅಗತ್ಯಗಳಿಂದಾಗಿ ಕಾಡು ಬಹು ಪಾಲು ನಾಶವಾಗಿದೆ. ಜೈವಿಕ ಅಸಮತೋಲನ ಉಂಟಾಗಿದೆ. ಆಧುನಿಕ ಬೆಳೆಗಳಾದ ಶುಂಠಿ, ರಬ್ಬರ್ ಮತ್ತು ವೆನಿಲ್ಲಾ ಕೃಷಿಯಿಂದಾಗಿ ರೈತರು ಬಳಸಿದ ಕೀಟನಾಶಕಗಳು ಮತ್ತು ರಾಸಾಯನಿಕಗಳಿಂದ ಪ್ರಾಕೃತಿಕ ಸಮತೋಲನ ನಾಶವಾಗಿದೆ. ಪರಿಸರದ ಜೈವಿಕ ಸರಪಳಿಯಲ್ಲಿ ಏರುಪೇರುಗಳಾಗಿವೆ. ಪರಿಣಾಮವಾಗಿ ಅನೇಕ ಕೀಟ ಪ್ರಾಣಿ ಪಕ್ಷಿ ಮತ್ತು ಸಸ್ಯಗಳು ಇಂದು ಅಳಿವಿನಂಚಿನಲ್ಲಿವೆ.

ಕುವೆಂಪು ಕೃತಿಗಳಲ್ಲಿ ಚಿತ್ರಿತವಾಗಿರುವ ಅಂದಿನ ಮಲೆನಾಡಿನ ಸಸ್ಯ ಮತ್ತು ಪ್ರಾಣಿ ಪರಿಸರ, ಇಂದು ಆಧುನಿಕ ಕೃಷಿಯಿಂದಾಗಿ ಸ್ಥಿತ್ಯಂತರಗೊಂಡಿರುವ ಮಲೆನಾಡಿನ ಪರಿಸರ ಇವುಗಳನ್ನು ಹೋಲಿಸಿ ಇಂದಿನ ಕೃಷಿ ಪದ್ಧತಿಯಲ್ಲಿರುವ ನೇತ್ಯಾತ್ಮಕ ಅಂಶಗಳನ್ನು ಗುರುತಿಸಿ ಅವುಗಳಿಗೆ ಕಾರಣಗಳನ್ನು ಅನ್ವೇಷಿಸುವುದು ನನ್ನ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ.

ಹೀಗೆ ಮಲೆನಾಡಿನ ಸಸ್ಯ ಪರಿಸರ ಮತ್ತು ಕೃಷಿಯಲ್ಲಿ ಬದಲಾವಣೆ ಉಂಟಾಗಲು ಇರುವ ಕಾರಣಗಳೇನು ಎಂಬುದನ್ನು ವಿವರವಾಗಿ ನನ್ನ ಅಧ್ಯಯನದಲ್ಲಿ ಪರಿಶೀಲಿಸಿದ್ದೇನೆ. ಆಧುನಿಕ ಕೃಷಿಗೆ ಇರುವ ಸಾಮಾಜಿಕ ಒತ್ತಡಗಳೇನು ? ಎಂಬುದನ್ನು ವಿಶ್ಲೇಷಣೆ ಮಾಡಿದ್ದೇನೆ. ಕುವೆಂಪು ಮತ್ತು ಸಸ್ಯ ವಿಜ್ಞಾನಿ ಬಿ.ಜಿ.ಎಲ್ ಸ್ವಾಮಿ ಇಬ್ಬರೂ ಸ್ವಾತಂತ್ರ್ಯ ಪೂರ್ವದ ಪಶ್ಚಿಮ ಘಟ್ಟಗಳ ಕಾಡಿನ ಚಿತ್ರಣ ಮಾಡಿದ್ದಾರೆ. ಕುವೆಂಪು ಕವಿಯಾಗಿ ಮತ್ತು ಕಾಡಿನ ಹಿನ್ನೆಲೆಯಿಂದಲೇ ಬಂದವರಾಗಿ ಈ ಕಾಡಿನ ಪರಿಸರವನ್ನು ಚಿತ್ರಿಸಿರುವ ಬಗೆಯನ್ನು ಅಧ್ಯಯನ ಮಾಡಿ ಬಿ.ಜಿ.ಎಲ್. ಸ್ವಾಮಿಯವರು ಪ್ರಕೃತಿಯ ನರ್ತನ ರಂಗಂ ಎಂದು ಆಗುಂಬೆಯ ಮಳೆ ಕಾಡಿನ ಅಧ್ಯಯನ ಮಾಡಿರುವುದರೊಂದಿಗೆ ಹೋಲಿಸಿ ಹೊಸ ಒಳ ನೋಟಗಳನ್ನು ಕಂಡು ಕೊಳ್ಳುವುದು ಕವಿ ಮತ್ತು ವಿಜ್ಞಾನಿಯ ದೃಷ್ಟಿಕೋನದಲ್ಲಿರುವ ಸಾಮ್ಯ ಮತ್ತು ವೈರುಧ್ಯಗಳನ್ನು ಗುರುತಿಸುವುದು. ಈ

ಅಧ್ಯಯನದಲ್ಲಿ ಸೇರಿದೆ.

ಕುವೆಂಪು ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಪ್ರಾಣಿ ಪರಿಸರ ಮತ್ತು ಇಂದಿನ ಮಲೆನಾಡ ಬದುಕಿನ ಪ್ರಾಣಿ ಪರಿಸರದ ಹೋಲಿಕೆಯನ್ನು ಈ ಅಧ್ಯಯನದಲ್ಲಿ ಮಾಡಿದ್ದೇನೆ. ಒಟ್ಟಿನಲ್ಲಿ ನನ್ನ ಪ್ರಬಂಧದಲ್ಲಿ ಕುವೆಂಪು ಕಾದಂಬರಿಗಳಲ್ಲಿ ಚಿತ್ರಿತವಾಗಿದ್ದ ಪರಿಸರ, ಜೀವನ ಶೈಲಿ ಕೃಷಿ ಪದ್ಧತಿಗಳು ಇಂದಿನ ಜಾಗತೀಕರಣದಲ್ಲಿ ಸಂದರ್ಭದಲ್ಲಿ ಬದಲಾಗಿವೆ. ಈ ಬದಲಾದಂಥಹ ಕೃಷಿ ಮತ್ತು ಜೀವನ ಶೈಲಿ ಮಲೆನಾಡಿನ ಪರಿಸರ ಬದಲಾವಣೆಗೂ ಕಾರಣವಾಗಿದೆ. ಮಲೆನಾಡಿನಲ್ಲಿ ಬೃಹತ್ ನೀರಾವರಿ ಯೋಜನೆಗಾಗಿ ಅರಣ್ಯ ಮುಳುಗಡೆಯಾಗಿದೆ. ಹೊಸ ಕಾಲದ ಕೃಷಿಯಲ್ಲಿ ಬಳಸುವ ಕೀಟ ನಾಶಕಗಳಿಂದಾಗಿ ಗದ್ದೆಯಲ್ಲಿದ್ದ ಏಡಿ , ಮೀನುಗಳು , ನಾಶವಾಗಿವೆ. ಗಣಿಗಾರಿಕೆಯಿಂದಾಗಿ ಭದ್ರಾ ನದಿ ಕಲುಷಿತವಾಗಿದೆ, ಈ ಎಲ್ಲ ಬದಲಾವಣೆಗಳಿಂದ ಮಲೆನಾಡು ಕಳೆದುಕೊಂಡಿರುವ ಮಹತ್ವದ ಜೈವಿಕ ವೈವಿಧ್ಯತೆಗಳೇನು ? ಅದು ಅನಿವಾರ್ಯವಾಗಿತ್ತೇ ಎಂದು ವಿಶ್ಲೇಷಿಸಿ ಮತ್ತೆ ಈಗಾಗಿರುವ ಹಾನಿಯನ್ನು ಸರಿಪಡಿಸುವುದು . ಹೇಗೆ ಎಂಬ ಚಿಂತನೆಯನ್ನು ನನ್ನ ಈ ಕಿರು ಪ್ರಬಂಧದಲ್ಲಿ ಮಂಡಿಸಲು ಆಶಿಸುತ್ತೇನೆ.

## 2.ಪರಿಸರ:

ನಾವು ಬದುಕುವ ಭೂಮಂಡಲದ ಒಂದು ಚಿಕ್ಕ ಭಾಗವೇ ಪರಿಸರ ನಮ್ಮ ಸುತ್ತಮುತ್ತ ಇರುವ ಜೈವಿಕ ಮತ್ತು ನಿರ್ಜೀವ ವಸ್ತುಗಳು ಒಂದು ಪರಿಸರವನ್ನು ರೂಪಿಸುತ್ತವೆ. ನಿರ್ಜೀವ ವಸ್ತುಗಳಾದ ನೀರು, ಗಾಳಿ, ಮಣ್ಣು, ಖನಿಜಗಳು, ವಾತಾವರಣ ಇತ್ಯಾದಿಗಳನ್ನು ಭೌತ ಪರಿಸರ ಎನ್ನಬಹುದು ಇದು ಒಂದು ಭಾಗವಾದರೆ, ಮತ್ತೊಂದು ಭಾಗ ಅತಿ, ಸೂಕ್ಷ್ಮಾಣುಜೀವಿಗಳಿಂದ ಹಿಡಿದು ಸಸ್ಯ ಹಾಗೂ ಪ್ರಾಣಿ ಪರಿಸರದವರೆಗೆನ ಜೀವ ಸಮೂಹದ್ದಾಗಿದೆ. ಭೌತ ಪರಿಸರದಲ್ಲಿ ವೈವಿಧ್ಯತೆ ಅಷ್ಟಾಗಿ ಕಂಡು ಬರುವುದಿಲ್ಲ. ಆದರೆ ಜೀವಿ ಸಮೂಹದಲ್ಲಿ ಕಲ್ಪನೆಗೂ ನಿಲುಕದಷ್ಟು ವೈವಿಧ್ಯವಿದೆ.

ಇಡೀ ವಿಶ್ವದಲ್ಲಿ ಜೀವ ಸಮೂಹವನ್ನು ಹೊಂದಿರುವ ಏಕೈಕ ಗ್ರಹ ಭೂಮಿ. ಭೂಮಂಡಲದಲ್ಲಿ ಹಬ್ಬಿರುವ ವಾಯು ಮಂಡಲ ಮತ್ತು ಭೂಮಿಯೊಂದರಲ್ಲಿ ಲಭ್ಯವಿರುವ ನೀರು ಜೀವ ವಿಕಾಸನಕ್ಕೆ ಆಧಾರವಾಗಿವೆ. ಸಸ್ಯ ಹಾಗೂ ಪ್ರಾಣಿಸಮೂಹವನ್ನು ಜೀವ ಸಮೂಹ ಎಂದು ಸಾಮಾನ್ಯವಾಗಿ ಸಂಭೋಧಿಸುತ್ತೇವೆ. ಜೀವಸಮೂಹ ಅಥವಾ ಜೀವಿಗಳನ್ನು ಹೊಂದಿರುವ ಭೂಗೋಳವನ್ನು ಜೀವಗೋಳ (biosphere) ಎನ್ನುತ್ತಾರೆ. ಜೀವಗೋಳದಲ್ಲಿ ಪ್ರತಿಯೊಂದು ಜೀವಿಗೂ ತನ್ನದೇ ಆದ ನಿರ್ದಿಷ್ಟ ದೈಹಿಕ ರಚನೆಯಿದೆ ಯಾದ್ದರಿಂದ, ಪರಿಸರ ಅಪಾರವಾದ ಜೀವ ವೈವಿಧ್ಯ ತೆಯಿಂದ ಕೂಡಿದ್ದಾಗಿದೆ (Biodiversity). ಇಲ್ಲಿ ಒಂದು ಜೀವಿ ಸಮೂಹ ಮತ್ತೊಂದು ಜೀವಿ, ಸಮೂಹದ ಮೇಲೆ ತನ್ನ ಆಹಾರ, ವಸತಿ ಇತ್ಯಾದಿಗಳಿಗಾಗಿ ಅವಲಂಬಿತವಾಗಿರುತ್ತದೆ.

19ನೆಯ ಶತಮಾನ ದಲ್ಲಿ Earnest haeckel 'ಪರಿಸರ' ಎಂಬ ಪರಿಕಲ್ಪನೆಯನ್ನು ಆರಂಭಿಸಿದನು. ಈ ನಿಟ್ಟಿನಲ್ಲಿ reiter(ರೈಟರ್) Ecology ಎಂಬ ಶಬ್ದವನ್ನು ಮೊದಲು ಬಳಕೆಗೆ ತಂದನು. ಜೀವಿಗಳ ಶೀಲಸ್ವಭಾವ, ಜೀವನ ರೀತಿ ಮತ್ತು ಅವುಗಳ ಪರಿಸರದೊಡನೆ ಅವುಗಳ ಸುತ್ತಲಿನ ಪರಿಸರದೊಡನೆ ಅವುಗಳಿಗಿರುವ ಸಂಬಂಧ, ಇದೆಲ್ಲದರ ಕುರಿತಾದ ಜೀವವಿಜ್ಞಾನಿಕ ಅಧ್ಯಯನವೆ ಇಕೋಲಜಿ ಅಥವಾ ಪರಿಸರ ಅಧ್ಯಯನ.

ಪರಿಸರ ವ್ಯವಸ್ಥೆಯು ಜೀವ ಮಂಡಲದ ಒಂದು ಕಾರ್ಯಘಟಕವಿದ್ದಂತೆ. ಇದು ಜೀವಿ, ಜೀವ ಸಮುದಾಯ ಮತ್ತು ಅಜೈವಿಕ ಅಂಶಗಳ ನಡುವಿನ ಸಂಬಂಧಗಳನ್ನು ಸೂಚಿಸುತ್ತದೆ. ಒಂದು ನಿರ್ದಿಷ್ಟ ಸ್ಥಳದಲ್ಲಿ ವಾಸಿಸುವ ಜೀವಿಗಳು ತಮ್ಮದೇ ಅದ ಪರಿಸರ ವ್ಯವಸ್ಥೆಯನ್ನು ರೂಪಿಸಿಕೊಳ್ಳುತ್ತವೆ. ಅರಣ್ಯ, ಬೆಟ್ಟ ಗುಡ್ಡ, ಕೆರೆ,ನದಿ, ಹುಲ್ಲುಗಾವಲು, ಸಮುದ್ರ, ಇತ್ಯಾದಿಗಳು ನೈಸರ್ಗಿಕ ಪರಿಸರ ವ್ಯವಸ್ಥೆ(ecosystem)ಅನ್ನು ಪ್ರತಿನಿಧಿಸುತ್ತವೆ. ಇಂತಹ ಪರಿಸರ

ವ್ಯವಸ್ಥೆಯಲ್ಲಿ ಅಜೈವಿಕ ಅಂಶಗಳಾದ ಘನ, ದ್ರವ ಮತ್ತು ಅನಿಲ ಪದಾರ್ಥಗಳು ಮತ್ತು ಜೈವಿಕ ಅಂಶಗಳಾದ ಸಸ್ಯ ಹಾಗೂ ಪ್ರಾಣಿ ಪ್ರಬೇಧಗಳು ಒಂದಕ್ಕೊಂದು ಹೊಂದಿಕೊಂಡು ಒಂದು ವ್ಯೂಹದಂತೆ ಸುವ್ಯವಸ್ಥಿತವಾಗಿ ಪ್ರಕ್ರಿಯೆ ನೆಡೆಸುತ್ತವೆ.ಅದರಿಂದಲೇ ಪರಿಸರದಲ್ಲಿ ಸ್ಥಿರತೆ ಮತ್ತು ಸಮಸ್ಥಿತಿಗಳಿರುತ್ತವೆ.

ಜೀವ ವಿಕಾಸದ ಹಾದಿಯಲ್ಲಿ ತೀರ ಇತ್ತೀಚಿಗಷ್ಟೇ ಅವತರಿಸಿದ ಮಾನವ, ಈ ಎಲ್ಲಾ ಪರಿಸರ ವ್ಯವಸ್ಥೆಯಲ್ಲಿ ಅತಿ ಹೆಚ್ಚು ಪ್ರಭಾವ ಬೀರುತ್ತಿರುವ ಒಂದು ಜೈವಿಕ ಅಂಶ.ಮಾನವ ತನ್ನ ಚಟುವಟಿಕೆಗಳಿಂದ ಪರಿಸರ ವ್ಯವಸ್ಥೆಗಳಲ್ಲಿನ ಪ್ರಾಕೃತಿಕ ಸಾಮಗಸ್ಯಕ್ಕೆ ಭಂಗವನ್ನುಂಟು ಮಾಡುತ್ತಿದ್ದಾನೆ.

ಹಿಂದೆ ಪ್ರಕೃತಿಗೆ ತೀರ ಸನಿಹವಾಗಿ ಬದುಕು ಸಾಗಿಸುತ್ತಿದ್ದ ಮಾನವ ತನ್ನ ಮೂಲ ಭೂತ ಅಗತ್ಯಗಳಿಗಷ್ಟೆ ಪರಿಸರದಲ್ಲಿನ ಪ್ರಾಣಿ ಮತ್ತು ಸಸ್ಯಗಳ ಮೇಲೆ ಅವಲಂಬಿತನಾಗಿದ್ದ ಆ ದಿನಗಳಲ್ಲಿ ಅಲೆಮಾರಿ ಜೀವನವನ್ನು ನೆಡೆಸುತ್ತಿದ್ದ. ಮಾನವ ತನ್ನ ಆಹಾರ ಮತ್ತು ವಸತಿಯನ್ನರಸುತ್ತಾ ಒಂದು ಪ್ರದೇಶದಿಂದ ಮತ್ತೊಂದೆಡೆಗೆ ಹೋಗಿ ಸ್ವಲ್ಪ ಸಮಯ ಅಲ್ಲಿ ನೆಲೆಸಿ ನಂತರ ಮತ್ತೊಂದೆಡೆ ನೆಲೆಸುತ್ತಿದ್ದ ಇದರಿಂದಾಗಿ ಒಂದೆಡೆಯಲ್ಲಿನ ಪರಿಸರ ನಿರಂತರ ಬಳಕೆಯಾಗುವುದು ತಪ್ಪುತ್ತಿತ್ತು.

ಇದರಿಂದ ಪರಿಸರ ವ್ಯವಸ್ಥೆಯಲ್ಲಿ ಸ್ಥಿರತೆ ಇರುವಂತೆ ಬದುಕುತ್ತಿದ್ದ ಮಾನವ ಇಂದು ಒಂದೆಡೆ ನೆಲೆಸಿದ ಪರಿಣಾಮ ನೈಸರ್ಗಿಕ ಪರಿಸರ ಬಹುತೇಕ ಕೃತಕ ಪರಿಸರವಾಗಿ ಪರಿವರ್ತನೆಗೊಂಡಿದೆ. ಒಂದು ಜೀವಿಗೆ ಮತ್ತೊಂದರ ಆಧಾರವೊದಗಿಸಿ ಜೀವಿಗಳು ಪೂರ್ಣ ಅಳಿದು ಹದಗೆಡದಂತೆ ಮಾಡುವ ಸಮತೋಲನ ವಿಧಾನ ಪ್ರಕೃತಿಯಲ್ಲಿದೆ. ಭೂಮಿಯ ಮೇಲೆ ಪ್ರಾಣಿಗಳು, ಸಸ್ಯಗಳು ಮತ್ತು ಮನುಷ್ಯ ಬಂದು ರೀತಿಯ ಸಾಮೂಹಿಕ ಜೀವನ ನಡೆಸುತ್ತಾರೆ. ಮೇಲು ನೋಟಕ್ಕೆ ಇವು ಸ್ವತಂತ್ರವೆಂದು ಕಂಡುಬಂದರೂ ಇವುಗಳೊಳಗೆ ಅಂತರಿಕ ಅವಲಂಬನೆ ಗಳಿರುತ್ತವೆ. ಸಾಮಾಜಿಕವಾಗಿ, ರಾಜಕೀಯವಾಗಿ, ಭಾಷೆ-ಪದ್ಧತಿಗಳಿಂದ ಮನುಷ್ಯರು ಬೇರೆ ಬೇರೆ ಗುಂಪುಗಳಾಗಿ ನೆಲೆಸಿದ್ದಾರೆ. ಪ್ರಾಣಿ ,ಸಸ್ಯಗಳ ಜೀವನಕ್ಕಿರುವುದು ಪ್ರಕೃತಿಯ ಮೇರೆಗಳು: ನಿರ್ದಿಷ್ಟ ನೆಲ, ಹವಾಮಾನ ಇತ್ಯಾದಿಗಳು.ಒಂದು ಜೀವಿ ಮತ್ತೊಂದನ್ನು ಆಧಾರ ಮಾಡಿಕೊಂಡು ಬದು

ಕುವುದರಿಂದ ಅವುಗಳ ನಡುವಿನ ಸಂಬಂಧವನ್ನು ಪರಿಸರ ಶಾಸ್ತ್ರಜ್ಞರು ಇದರ ಆಧಾರದ ಮೇಲೆ ಎಕೋಲಾಜಿಕಲ್ ಪಿರಮಿಡ್‌ಗಳ ರಚನೆ ಮಾಡಿ ಅಧ್ಯಯನ ನಡೆಸುತ್ತಾರೆ. ಇಲ್ಲಿ ಉತ್ಪಾದನಾ ಜೀವಿ ವರ್ಗ ಪ್ರಥಮ ಹಂತದಲ್ಲಿರುತ್ತದೆ.ಉದಾ:-ಹುಲ್ಲು, ಸಸ್ಯ, ಗಿಡ,ಮರ ,ಪಾಚಿ ಇತ್ಯಾದಿ (producers)

ನಂತರದಹಂತದಲ್ಲಿ ಬರುವ ಜೀವಿ ವರ್ಗ ಪ್ರಥಮ ಜೀವಿವರ್ಗದ ಮೇಲೆ ಆಹಾರಕ್ಕಾಗಿ ಅವಲಂಬಿತವಾಗಿರುತ್ತದೆ.(ಉದಾ:-ಸಸ್ಯ ಹಾರಿ ಪ್ರಾಣಿಗಳಾದ ಜಿಂಕೆ, ಮೊಲ, ಕಡವೆ, ಕುರಿ, ಕಾಡೆಮ್ಮೆ (primary consumers or herbivore)

ಮೂರನೆಯ ಹಂತದಲ್ಲಿ ಎರಡನೆ ಹಂತದ ಸಸ್ಯಹಾರಿ ಜೀವಿಗಳ ಮೇಲೆ ಆಹಾರಕ್ಕಾಗಿ ಅವಲಂಬಿಸಿರುವ (ಉದಾ:-ಹುಲಿ, ತೋಳ ಇತ್ಯಾದಿ)(secondary consumer or cornivore)

ಇವುಗಳು ಸತ್ತನಂತರ ಭೂಮಿಯಲ್ಲಿನ ಸೂಕ್ಷ್ಮಜೀವಿಗಳು ಅವುಗಳ ಶರೀರವನ್ನು ಮಣ್ಣಲ್ಲಿ ಕೊಳೆಯಿಸಿ ಮಣ್ಣಿನ ಫಲವತ್ತತೆ ಹೆಚ್ಚಾಗಿಸುತ್ತವೆ. ಅಲ್ಲಿ ಬೆಳೆಯುವ ಸಸ್ಯಗಳು ಆ ಪೌಷ್ಟಿಕಾಂಶಗಳನ್ನು ಹೀರಿಕೊಂಡು ಚೆನ್ನಾಗಿ ಬೆಳೆಯುತ್ತವೆ. ಈರೀತಿಯ ಅನೇಕ ವಿಧದ ಆಹಾರ ಸರಪಳಿಗಳು ಪ್ರಕೃತಿಯಲ್ಲಿ ಕಂಡುಬರುತ್ತವೆ.

ಇಲ್ಲಿ ಪ್ರತಿಹಂತವನ್ನು **Trophic level** ಎನ್ನುತ್ತೇವೆ. ಶಕ್ತಿ ಒಂದು ಹಂತದಿಂದ ಮತ್ತೊಂದು ಹಂತಕ್ಕೆ ಆಹಾರ ಸರಪಳಿಯಲ್ಲಿ ಶಕ್ತಿ ವರ್ಗಾಯಿಸಲ್ಪಡುತ್ತದೆ ಅಲ್ಪ ಪ್ರಮಾಣದ ಶಕ್ತಿ ಶಾಖದ ರೂಪದಲ್ಲಿ ವಾತಾವರಣಕ್ಕೆ ಬಿಡುಗಡೆ ಆಗುತ್ತದೆ. ಈಹಂತಗಳಲ್ಲಿ ಯಾವುದಾದರೂ ಒಂದಕ್ಕೆ ಹಾನಿಯಾದರೂ ಅದರ ಮೇಲಿನ ಹಂತದಲ್ಲಿ ಸಮತೋಲನ ತಪ್ಪುತ್ತದೆ.




ಶಕ್ತಿ ವಾತಾವರಣಕ್ಕೆ ಬಿಡುಗಡೆಯಾಗಿತ್ತದೆ.

(pyramid of numbers) ಸಂಖ್ಯಾಧಾರಿತ ಜೈವಿಕ ಪಿರಮಿಡ್

ಅಂದು ಆಹಾರ ವಸತಿ, ಸಾಕು ಪ್ರಾಣಿಗಳ ಮೇವಿಗೆ,ಅವುಗಳ ಗೊಬ್ಬರ, ಆಹಾರಕ್ಕಾಗಿ ಕಾಡು ಪ್ರಾಣಿಗ ಳು, ರೋಗ ರುಜಿನೆಗಳಿಗಾಗಿ ಔಷಧೀಯ ಸಸ್ಯಗಳು ಮಾನವನು ಮೂಲಭೂತ ಅಗತ್ಯಗಳ ಪೂರೈಕೆಗಾಗಿ ತಾನು ವಾಸಿಸುತ್ತಿದ್ದ ಪರಿಸರದಲ್ಲೇ ದೊರಕುತ್ತಿದ್ದ ಸಂಪನ್ಮೂಲವನ್ನು ಪಡೆದು ನೆಮ್ಮದಿಯಬದುಕು ಸಾಗಿಸುತ್ತಿದ್ದ ಜೈವಿಕ ವೈವಿಧ್ಯದ ಮೌಲ್ಯವಾಗಲೀ ಪರಿಸರದ ಕಾಳಜಿಯಾಗಲಿ ಇಂದಿನಷ್ಟು ಇರಲಿಲ್ಲ ವಿಕಾಸದ ಹಾದಿಯಲ್ಲಿ ಮನವ ಸಂಪನ್ಮೂಲ ಹೆಚ್ಚಾದಂತೆಲ್ಲಾ, ಬದಲಾದ ಸಂಪೂರ್ಣ ಜೀವನ ಕ್ರಮದಿಂದಾಗಿ ಪರಿಸರದಲ್ಲಿ ಗಣನೀಯ ಬದಲಾವಣೆಗಳಾಗಿವೆ.

ಪ್ರಾಚೀನ ನಾಗರಿ ಕತೆಗಳಾದ ಹರಪ್ಪ ಮೊಹೆಂಜೋದಾರೋಗಳು ಅವನತಿ ಹೊಂದಲು ಅರಣ್ಯ ನಾಶವೇ ಮುಖ್ಯಕಾರಣವೆಂದರೆ ತಪ್ಪಾಗಲಾರದು. ಅರಣ್ಯನಾಶದ ಪರಿಣಾಮವಾಗಿ ಉಂಟಾದ ಮಣ್ಣಿನ ಸವಕಳಿಯಿಂದ ಈ ಪ್ರಾಚೀನ ನಾಗರೀಕತೆಗಳು ನಾಶಹೊಂದಿದವು.

ದಕ್ಷಿಣ ಭಾರತದ ಪಶ್ಚಿಮ ಕರಾವಳಿಗೆ ಸಮೀಪದಲ್ಲಿ, ತಪತಿ ನದಿಯ ಬಳಿಯಿಂದ ಕನ್ಯಾಕುಮಾರಿಯವರೆಗೆ ಸುಮಾರು 1,300 ಕಿ.ಮೀ. ವಿಸ್ತೀರ್ಣದವರೆಗೆ ಹಬ್ಬಿರುವ ಪರ್ವತಶ್ರೇಣಿ ಸಹ್ಯಾದ್ರಿ. ಈ ಘಟ್ಟಗಳು ಮಹಾರಾಷ್ಟ್ರ, ಗೋವ, ಕರ್ನಾಟಕ, ತಮಿಳುನಾಡು ಹಾಗು ಕೇರಳ ಭಾಗ ಗಳಲ್ಲಿ ಹರಡಿವೆ. ಸಮುದ್ರ ಮಟ್ಟದಿಂದ ಸುಮಾರು 1,220 ಮೀ ಎತ್ತರದಲ್ಲಿ ಸಾಗಿರುವ ಈ ಘಟ್ಟ ಪ್ರದೇಶಗಳು ಸಮುದ್ರದಿಂದ 32 ರಿಂದ 100 ಕಿ.ಮೀ. ಅಂತರದಲ್ಲಿವೆ. ಪಶ್ಚಿಮ ಘಟ್ಟಗಳ ಉದ್ದಕ್ಕೂ ಪೂರ್ವ ಭಾಗಕ್ಕೆ ಹಲವು ಚಾಚುಗಳು ಹಾಗು ಉಪಶ್ರೇಣಿಗಳು ಹರಡಿವೆ. ಪಶ್ಚಿಮ ಘಟ್ಟಗಳು ಭೌಗೋಳಿಕವಾಗಿ ಉತ್ತರ ಅಕ್ಷಾಂಶ 21°6' ಮತ್ತು ಪೂರ್ವ ರೇಖಾಂಶ 74°11` ಗಳಲ್ಲಿ ಕಂಡು ಬರುತ್ತವೆ.

ಮಹಾರಾಷ್ಟ್ರದ ಕಡೆ ಪಶ್ಚಿಮ ಘಟ್ಟಗಳಲ್ಲಿ ಮೂರನೇ ಭೂ ಯುಗದ ಶಿಲಾ ಪದರಗಳು, ಅಗ್ನಿ ಶಿಲೆ, ಪುಡಿಗಳುಟ್ಟುವ ಕೆಂಪು ಜೇಡಿ ಶಿಲೆ, ಬೆಣಚು ಕಲ್ಲು, ಮರಳುಗಲ್ಲು ಇವೆ. ಗಿರಿಗಳ ಚಪ್ಪಟೆಯ ತುದಿ ಗಳಲ್ಲಿ ಗೋಡೆಗಳಂತಿರುವ ಮಣ್ಣಿನ ಪದರಗಳು ಹಾಗು ಅಗ್ನಿ ಶಿಲೆಗಳನ್ನು ತನ್ನಲ್ಲಿ ಒಳ ಗೊಂಡಿರುತ್ತವೆ. ಸಹ್ಯಾದ್ರಿಯ ತಪ್ಪಲು ಹಲವಾರು ದೊಡ್ಡ ದೊಡ್ಡ ಮರಗಳ ದಟ್ಟಡವಿಗಳಿಂದ ಕೂಡಿದ್ದಾಗಿದೆ.

ಶಿವಮೊಗ್ಗ ಜಿಲ್ಲೆಯಲ್ಲಿ ಕೊಡಚಾದ್ರಿ ಪರ್ವತದಿಂದ ಉತ್ತರಕ್ಕೆ ಕೊಲ್ಲೂರು ಘಾಟ್‌ವರೆಗೆ, ಹೊಸಂಗಡಿ ಘಾಟ್, ಆಗುಂಬೆ ಘಾಟ್, ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೊಕಿನ ಭೂಂದ್ ಘಾಟ್, ಹಾಸನ ಜಿಲ್ಲೆಯ ಮಂಜರಾಬಾದ್ ಘಾಟ್ ಮತ್ತು ಬಿಸಲೆ ಘಾಟ್‌ಗಳು ಪಶ್ಚಿಮ ಘಟ್ಟಗಳ ವ್ಯಾಪ್ತಿಯಲ್ಲಿ

ಬರುತ್ತವೆ. ಇವೆಲ್ಲಾ ಪಶ್ಚಿಮ ಘಟ್ಟಗಳ ಪೂರ್ವದ ಸ್ಥಳಗಳಿಗೂ ಪಶ್ಚಿಮದ ಕರಾವಳಿಗೂ ಸಂಬಂಧ ಕಲ್ಪಿಸುತ್ತವೆ.

ಶಿವಮೊಗ್ಗ ಜಿಲ್ಲೆಯಲ್ಲಿ ಸಾಗರ ತಾಲ್ಲೋಕಿನಲ್ಲಿರುವ ಪಶ್ಚಿಮದ ಗೋವರ್ಧನಗಿರಿಯಿಂದ ದೇವರಕೊಂಡದವರೆಗೆ ಪಶ್ಚಿಮ ಘಟ್ಟಗಳ ಸಾಲು ಸಮುದ್ರದಂಚಿಗೆ ಇರುವ ಅಂತರ ಕೇವಲ ಹದಿನಾರು ಕಿ.ಮೀ. ಅಷ್ಟೇ. ಅಲ್ಲಿಂದ ಆಗ್ನೇಯದ ಕಡೆಗೆ ಸಾಗಿ ಚಿಕ್ಕಮಗಳೂರು ಜಿಲ್ಲೆಯ ನೈರುತ್ಯದಲ್ಲಿನ ಕುದುರೆಮುಖದ ಕಡೆಗೆ ಹಬ್ಬಿದೆ. ಕೃಷ್ಣಾ ಹಾಗು ಕಾವೇರಿ ನದಿಗಳ ಉಪನದಿಗಳಾದ ಹೇಮಾವತಿಯ ಹರಿವಿನ ಪ್ರದೇಶದಿಂದ ಮುಂದಕ್ಕೆ ಸಾಗುವ ಈ ಘಟ್ಟಗಳ ಸಾಲು ಕೊಡಗಿನ ಕಡೆ ಮುಂದುವರೆಯುತ್ತದೆ. ಇಲ್ಲೂ ಸಹ ಪ್ರಧಾನ ಶ್ರೇಣಿಯಿಂದ ಉಪಶ್ರೇಣಿಗಳು ಪೂರ್ವಕ್ಕೆ ಹಬ್ಬಿ ಸಾಗಿವೆ.

ಶಿವಮೊಗ್ಗ ಜಿಲ್ಲೆಯ ಅಂಬುತೀರ್ಥದಲ್ಲಿ ಉದ್ಭವಿಸುವ ಶರಾವತಿ, ಹರಿದ್ರಾ ನದಿಯೊಂದಿಗೆ ಕೂಡಿ, ಮುಂದೆ ಹರಿದು, ಜೋಗದಲ್ಲಿ ಧುಮುಕಿ, ಪಶ್ಚಿಮ ಘಟ್ಟಗಳ ಮುಖಾಂತರ ಹಾದು ಹೊನ್ನಾವರದ ಬಳಿ ಸಮುದ್ರ ಸೇರುತ್ತದೆ.

ಶಿವಮೊಗ್ಗ ಜಿಲ್ಲೆಯ ಪಶ್ಚಿಮ ಘಟ್ಟಗಳ ಕವಲುಗಳು ಕೊಡಚಾದ್ರಿ ಪರ್ವತ ಘಟ್ಟಗಳು ಅತಿ ಎತ್ತರವಾಗಿವೆ. ಪಶ್ಚಿಮ ಘಟ್ಟಗಳಲ್ಲಿ ಮನಮೋಹಕ ನೈಸರ್ಗಿಕ ದೃಶ್ಯಗಳಿವೆ. ಆಗುಂಬೆಯ ಘಾಟಿನ ಸೂರ್ಯಾಸ್ತ ದೃಶ್ಯ ಜಗತ್ಪ್ರಸಿದ್ಧವಾದುದ್ದು. ಇಲ್ಲಿನ ದಟ್ಟಡವಿ ಅದರಲ್ಲಿನ ಚಿಕ್ಕ ಪುಟ್ಟ ಝರಿಗಳು, ಸಸ್ಯ ಶ್ಯಾಮಲೆಯ ಮಧ್ಯೆ ಹಬ್ಬಿದ ಮಂಜು ಈ ಸೌಂದರ್ಯಕ್ಕೆ ಮೆರಗನ್ನು ನೀಡುತ್ತದೆ.

ಜೂನ್-ತಿಂಗಳಿನಿಂದ ಆರಂಭವಾಗುವ ಮುಂಗಾರುಮಳೆ ಸೆಪ್ಟಂಬರ್ ತಿಂಗಳಿನವರೆಗೂ ಎಡೆಬಿಡದೆ ಸುರಿಯುತ್ತಿರುತ್ತದೆ. ಅಕ್ಟೋಬರ್‌ನಲ್ಲಿ ಹಿಂಗಾರು ಮಳೆಯೂ ಇರುತ್ತದೆ.

ಪಶ್ಚಿಮ ಘಟ್ಟಗಳಲ್ಲಿನ ವೈವಿಧ್ಯಮಯ ಜೀವಸಂಕುಲಕ್ಕೆ ಕಾರಣ ಇಲ್ಲಿನ ಮಳೆ, ಮತ್ತು ವಾತಾವರಣವಾದರೆ, ವೈವಿದ್ಯಮಯ ಪ್ರಾಣಿ ಜಗತ್ತಿಗೆ ಕಾರಣ ಇಲ್ಲಿನ ನಿಬಿಡ ಕಾನನ.

ಪಶ್ಚಿಮ ಘಟ್ಟಗಳಲ್ಲಿ ಕಂಡು ಬರುವ ನಿತ್ಯಹರಿದ್ವರ್ಣದ ಕಾಡುಗಳನ್ನು ಉಷ್ಣ ವಲಯದ ಮಳೆಗಾದು (tropical rain forest) ಅಥವಾ ಮಾನ್ಸೂನ್ ಕಾಡುಗಳು (Mansoon forest) ಎಂದು ಕರೆಯುತ್ತಾರೆ. ಈ ಕಾಡುಗಳಲ್ಲಿ ಉಷ್ಣಾಂಶ ಮಳೆಗಾಲದಲ್ಲೂ ಸಹ ಅಧಿಕವಾಗಿದ್ದು, ಭಾರಿ ಮಳೆ ಸುರಿಯುತ್ತದೆಯಾದ್ದರಿಂದ ಇಲ್ಲಿ ದಟ್ಟವಾದ ಸದಾ ಹಸಿರಿನಿಂದ ಕಂಗೊಳುಸುವ ದಟ್ಟ ಕಾಡುಗಳು ಬೆಳೆದಿವೆ.

ಇಲ್ಲಿನ ಅರಣ್ಯ ಮೂರು ಅಂತಸ್ತನ್ನು ಒಳಗೊಂಡಿದೆ. ಮೊದಲನೆಯ ಅಂತಸ್ತು 60 ಅಡಿಗಳಷ್ಟು ಎತ್ತರಕ್ಕೆ ಬೆಳೆಯುವ ಮರಗಳನ್ನು ಒಳಗೊಂಡರೆ, ಎರಡನೆಯ ಅಂತಸ್ತು ಸುಮಾರು ನೂರರಿಂದ ನೂರಿಪ್ಪತ್ತು ಅಡಿಗಳಷ್ಟು ಎತ್ತರಕ್ಕೆ ನೇರವಾಗಿ ಬೆಳೆದು ತುದಿಯಲ್ಲಿ ಮಾತ್ರ ಕೊಂಬೆಗಳನ್ನು ಹೊಂದಿದ್ದು ಎಲೆಗಳಿರುತ್ತವೆ. ಇನ್ನೂ ಕೊನೆಯದಾಗಿ ಮೂರನೆಯ ಅಂತಸ್ತು, ಈ ಎರಡೂ ಅಂತಸ್ತುಗಳನ್ನು ಮೀರಿ ನೂರ ಇಪ್ಪತ್ತರಿಂದ ಇನ್ನೂರು ಅಡಿಗಳವರೆಗೆ ಅತಿ ಎತ್ತರಕ್ಕೆ ಬೆಳೆದು, ಮುಗಿಲನ್ನು ಚುಂಬಿಸುವಂತೆ ಆಕಾಶದೆಡೆ ಮುಖ ಮಾಡಿ ನಿಂತು, ಸಂಪೂರ್ಣವಾಗಿ ಸೂರ್ಯನ ಬೆಳಕನ್ನು ಪಡೆದುಕೊಳ್ಳುತ್ತವೆ. ಇಲ್ಲಿ ಪ್ರತಿಯೊಂದು ಅಂತಸ್ತಿನಲ್ಲೂ ಅಲ್ಲಿನ ಹವಾಗುಣಕ್ಕೆ ಹೊಂದಿಕೊಂಡು ಆ ಸಸ್ಯಗಳಲ್ಲಿ ವಸತಿ ಆಶ್ರಯ ಪಡೆದು ಬದುಕುವ ಪ್ರಾಣಿ ಸಂಕುಲಗಳು ಕಂಡುಬರುತ್ತವೆ.

ಸಾಮಾನ್ಯವಾಗಿ ಮಲೆನಾಡಿನ ಕಾಡುಗಳಲ್ಲಿ ಮರಗಳು ದಟ್ಟವಾಗಿ ಬೆಳೆದು, ರೆಂಬೆಗಳು ಚಪ್ಪರದಂತೆ (canopy) ಹರಡಿ, ಹಾಸುಹೊಕ್ಕಾಗಿ ಬೆಳೆದಿರುತ್ತವೆ. ಹೀಗಾಗಿ ಕಾಡಿನ ತಳಭಾಗಕ್ಕೆ ಸೂರ್ಯನ ಕಿರಣಗಳು ನೇರವಾಗಿ ತಲುಪದೆ ಅಲ್ಲಿ ಕತ್ತಲೆ ಹಾಗು ತೇವಾಂಶ ಅಧಿಕವಾಗಿರುತ್ತದೆ. ಅಲ್ಲೊಂದು ಇಲ್ಲೊಂದು ರಂಧ್ರಗಳ ಮುಖಾಂತರ ಹರಿಯುವ ಬೆಳಕಿನಂತೆ, ಸೂರ್ಯನ ಕಿರಣಗಳು ಭೂಮಿಗೆ ಅಪರೂಪಕ್ಕೆ ಬಿದ್ದಿರುತ್ತದೆ. ಎತ್ತರದ ಮರಗಳಲ್ಲಿ ಬೆಳೆದಿರುವ ಅನೇಕ ವಿಧದ ಬಳ್ಳಿಗಳು ಸೂರ್ಯನ ಬೆಳಕನ್ನು ತಾವು ಪಡೆದುಕೊಳ್ಳಲು ಇತರೆ ಮರಗಳೊಂದಿಗೆ ಸ್ಪರ್ಧಿಸಿ ಪೈಪೋಟಿಯಿಂದ ಮೇಲಕ್ಕೇರುತ್ತವೆ.

ಚಪ್ಪರದಂತೆ ಹರಡಿದ ಎಲೆಗಳ ತೇವಾಂಶದಿಂದಾಗಿ ಕೆಳಭಾಗದಲ್ಲಿ ಅನೇಕ ಶೈವಲಗಳು, ಶಿಲೀಂದ್ರಗಳು, ಜರಿಗಿಡಗಳು, ಆರ್ಕಿಡ್‌ಗಳು, ಹಾವಾಸೆಗಳು ಇತರ ಮರಗಳನ್ನಾಶ್ರಿಸಿಯೋ ಇಲ್ಲವೇ ನೆಲದ ಮೇಲೋ ಬೆಳೆಯುತ್ತವೆ.

ತೇವಾಂಶ ಅಧಿಕವಾಗಿದ್ದೆಡೆಗಳಲ್ಲಿ ಅನೇಕ ಪಾಚಿಗಳು, ಅಣಬೆಗಳು ಸಹ ಕಂಡುಬರುತ್ತವೆ. ಈ ಕಾಡಿನಲ್ಲಿ ನೆಲವಂತೂ ಸಂಪೂರ್ಣವಾಗಿ ತರಗೆಲೆಗಳಿಂದ ಮುಚ್ಚಲ್ಪಟ್ಟಿರುತ್ತವೆ.

ಸಹ್ಯಾದ್ರಿಯ ಕಾಡುಗಳಲ್ಲಿ ತೇಗ, ಬಿದಿರು, ಸಾಲ್, ಶ್ರೀಗಂಧ, ಹೊನ್ನೆ, ಧೂಮ, ಧೂಪ ಇತ್ಯಾದಿ ಮರಗಳು ಹೇರಳವಾಗಿ ಬೆಳೆಯುತ್ತವೆ. ಇವುಗಳೊಂದಿಗೆ ಔಷಧಿಯ ಗುಣವುಳ್ಳ ಅನೇಕ ಸಸ್ಯಗಳು, ಮಸಾಲೆ ಪದಾರ್ಥಗಳನ್ನಾಗಿ ಬಳಸುವ ಸಸ್ಯಗಳನ್ನೊಳಗೊಂಡಂತೆ ವಿಭಿನ್ನ ಸಸ್ಯ

ರಾಶಿಯು ಇಲ್ಲಿ ಕಂಡುಬರುತ್ತವೆ. ಇಲ್ಲಿನ ನೆಲದ ಮೇಲಿನ ತರಗೆಲೆ ರಾಶಿಯಿಂದ ಹಿಡಿದು ಮೂರನೆಯ ಅಂತಸ್ತಿನ ಮರಗಳ ಹಸಿರು ಛಾವಣಿಯಯವರೆಗೆ ಅಸಂಖ್ಯಾತ ಪ್ರಾಣಿ, ಪಕ್ಷಿ, ಉರಗ, ಹಾಗು ಕೀಟ ವೈಶಿಷ್ಟ್ಯವನ್ನು ತನ್ನಲ್ಲಿ ಹೊಂಟದೆ

## 3.ಕುವೆಂಪು ಸಾಹಿತ್ಯದಲ್ಲಿ ಮಲೆನಾಡಿನ ಪರಿಸರ:

1967 ರಲ್ಲಿ ಪ್ರಥಮ ಮುದ್ರಣಗೊಂಡ ಕಾದಂಬರಿ `ಮಲೆಗಳಲ್ಲಿ ಮದುಮಗಳು` 19ನೆಯ ಶತಮಾನದ ಅಂತ್ಯದ ಹಾಗು 20ನೆಯ ಶತಮಾನದ ಆದಿಯಲ್ಲಿನ ಮಲೆನಾಡಿನ ಪರಿಸರ, ಅಲ್ಲಿನ ಜೀವನ ಶೈಲಿಯ ಚಿತ್ರಣ ಮೂಡಿಸುತ್ತದೆ. ಕುವೆಂಪು ಕಾದಂಬರಿಗಳಲ್ಲಿ ಮೂಡಿ ಬಂದಿರುವಂತೆ , ಅಂದು ಪ್ರಕೃತಿಗೆ ತೀರಾ ಸನಿಹವಾಗಿ ಬದುಕು ಸಾಗಿಸುತ್ತಿದ್ದ ಮಲೆನಾಡಿನ ಜನರು, ತಮ್ಮ ದೈನಂದಿನ ಅವಶ್ಯಕತೆಗಳಿಗಾಗಿ (ಆಹಾರ, ವಸತಿ ಇತ್ಯಾದಿ) ಕಾಡಿನ ಮೇಲೆ ಅವಲಂಬಿತರಾಗಿದ್ದರು. ಕಾಡಿನಲ್ಲಿ ದೊರಕುತ್ತಿದ್ದ ನೈಸರ್ಗಿಕ ವಸ್ತುಗಳೇ ಮೂಲವಾಗಿದ್ದವು. ಹುಲಿಕಲ್ಲು ಗುಡ್ಡದ ನಿಬಿಡತೆಯ ಬಗ್ಗೆ ಕುವೆಂಪು ತಮ್ಮ ಕಾದಂಬರಿಯಲ್ಲಿ ಅನೇಕ ಬಾರಿ ವಿವರಿಸಿದ್ದಾರೆ.

ಕುವೆಂಪುರವರ ಕಾದಂಬರಿಗಳಾದ ಮಲೆಗಳಲ್ಲ ಮದುಮಗಳು ಮತ್ತು ಕಾನೂರು ಹೆಗ್ಗಡತಿಯಲ್ಲಿ ಚಿತ್ರಿತವಾಗಿರುವ ಮಲೆನಾಡು ಜೀವವೈವಿಧ್ಯದಿಂದ ಕೂಡಿರುವ ಮಳೆಯಕಾಡು. ತುಂಗಾನದಿಗೆ ಸೇತುವೆಯೂ ಇಲ್ಲದೆ ಇದ್ದ ಕಾಲದಲ್ಲ ಮಲೆನಾಡು ಈಗಿನಂತೆ ಆಧುನಿಕತೆಯ ದಾಳಿಗೆ ತುತ್ತಾಗಿ ರಲ್ಲಿಲ್ಲ. ಸಹಜವಾಗಿದ್ದ ಕಾಡು ಮತ್ತು ಸಮೃದ್ಧವಾಗಿದ್ದ ಕಾಡು ಪ್ರಾಣಿಗಳು ವೈವಿಧ್ಯಮಯವಾಗಿದ್ದ ಸಸ್ಯ ಪರಿಸರ ಅಂದಿನ ಮಲೆನಾಡಿನಲ್ಲಿತ್ತು. ಕಾದಂಬರಿಯಲ್ಲಿ, ಪಶ್ಚಿಮ ಘಟ್ಟಗಳ ಅಗಣ್ಯಪ್ರದೇಶ ಮತ್ತು ಅದರಲ್ಲಿನ ಬದುಕು ಕೇವಲ ಮಾನವ ಕೇಂದ್ರಿತವಾಗಿರದೆ ಜೀವಕೇಂದ್ರಿತವಾಗಿ ಮೂಡಿಬಂದಿದೆ. ಇಲ್ಲಿ ಪ್ರತಿಯೊಂದು ಜೀವಿಗೂ ಮಾನವನೊಂದಿಗಿನ ಸಂಬಂಧಕ್ಕೆ ಹೆಚ್ಚು ಒತ್ತು ನೀಡಲಾಗಿದೆ.

ಈ ಕುರಿತು ಅನೇಕ ವಿಮರ್ಶಕರು ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದ್ದಾರೆ,

ಟಿ.ಪಿ ಅಶೋಕ್,ಕುವೆಂಪು ಕಾದಂಬರಿಗಳ ವಿಮರ್ಶೆಯಲ್ಲಿ , ಪ್ರಕೃತಿಗೆ ತೀರ ನಿಕಟವಾಗಿ ಬದುಕುತಿರುವ ಈ ಮನುಷ್ಯ ಸಮೂಹದ ಕತೆಯಲ್ಲಿ ಪ್ರಕೃತಿ ಸಹಜವಾಗಿಯೇ ತನ್ನ ಪ್ರಾಮುಖ್ಯತೆಯನ್ನು ಮೆರೆದಿದೆ. ಈಕಾದಂಬರಿಯ ಪ್ರಾದೇಶಿಕ ಗುಣವೇ ಅದರ ಕಡು ವಾಸ್ತವಿಕತೆ ಗೂ ಕಾರಣವಾಗಿದೆ(``ಟಿ.ಪಿ ಅಶೋಕ್ ಕುವೆಂಪು ಕಾದಂಬರಿಗಳ ಎರಡು ಅಧ್ಯಯನ ಪುಟ -1 ಕಾನೂರುಹೆಗ್ಗಡತಿ-ವಸ್ತುವಿಶ್ಲೇಷಣೆ``)

ಕುವೆಂಪು ಸಾಹಿತ್ಯದಲ್ಲಿ ಚಿತ್ರಿತವಾಗಿರುವ ಮಲೆನಾಡಿನ ಸುಂದರ ಪರಿಸರ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಸುತ್ತ ಮುತ್ತಲಿನ ಗ್ರಾಮಗಳದ್ದೇ ಆಗಿದೆ, ಈಹೇಳಿಕೆಯನ್ನು ಸಮರ್ಥಿಸುವ ಉಲ್ಲೇಖವೊಂದು ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಕಂಡುಬರುತ್ತದೆ. ಹೂವಯ್ಯನು ಒಂದು ಪುಸ್ತಕವನ್ನು ತೆಗೆದು ಬಿಚ್ಚಿ (ಸೀತೆಗೆ ತೋರಿಸುತ್ತಾ) ``ಇದು ನಾವಿರುವ ಭೂಮಿ`` ಎಂದನು, ಹೀಗೆ ಆಕೆಗೆ ಸೂರ್ಯ ನಕ್ಷತ್ರಗಳ ಪರಿಚಯ ಮಾಡಿಸುತ್ತಾ ಭಾರತದ ಭೂಪಟವನ್ನು ತೋರಿಸಿ, ``ಇದು ನಮ್ಮ ಭರತಖಂಡ ಇದು ನಮ್ಮ ಶ್ರೀ ಮನ್ಮಹಾರಾರಾಜರು ಆಳುವ ನಾವಿರುವ ಮೈಸೂರು ದೇಶ`` ಎಂದು ತೋರಿಸಿದನು. ಆಗ ಆಕೆ ಸೋಜಿಗದಿಂದ ಮಹಾರಾಜರ ದೇಶ ಇಷ್ಟು ಸಣ್ಣದೇ ಹಾಗಾದರೆ ತೀರ್ಥಹಳ್ಳಿ ಎಲ್ಲಿದೇ ಎಂದು ಪ್ರಶ್ನಿಸುತ್ತಾಳೆ. ಹೂವಯ್ಯ ``ಇದರಲ್ಲಿ ಅದಿಲ್ಲ ಬಹಳ ಚಿಕ್ಕದು ಆದ್ದರಿಂದ ಎಂದು, ಮೈಸೂರು ದೇಶದ ಪಠವನ್ನು ತೋರಿಸಿ ಒಂದು ಸಣ್ಣ ಚುಕ್ಕಿಯ ಮೇಲೆ ಬೆರಳಿಟ್ಟು ``ಇದೆ ನಿನ್ನ ತೀರ್ಥಹಳ್ಳಿ ಎಂದನು.ಸೀತೆ ಅಯ್ಯಯ್ಯೋ! ಇಷ್ಟೇನೆ ಎಂದಳು.

ಮೆಚ್ಚಿದ ತನಗೆ ಅಷ್ಟು ದೊಡ್ಡದಾಗಿದ್ದ ತೀರ್ಥಹಳ್ಳಿಗೆ ಇಷ್ಟು ಸಣ್ಣಚುಕ್ಕಿಯೇ ಭೂಪಠದಲ್ಲಿ ಎಂದು ಅವಳಿಗೆ ಸೋಜಿಗವಾಯಿತು. ``ಹಾಗಾದರೆ ನಮ್ಮ ಮುತ್ತಳ್ಳಿ ``? ಎಂದು ಕೇಳಿದಾಗ ಹೂವಯ್ಯ ನಕ್ಕು ಮುತ್ತಳ್ಳಿಯನ್ನು ಚುಕ್ಕಿಯಿಂದಲೂಕೂಡ ನಿರ್ದೇಶಿಸಲು ಸಾಧ್ಯವಿಲ್ಲ ಅದು ಅಷ್ಟು ಸಣ್ಣದು ಎಂದು ವಿವರಿಸಿದನು. ಈಮೇಲಿನ ಭಾಗ ಕುವೆಂಪುರ ಕಾದಂಬರಿಯಲ್ಲಿ ಮೂಡಿಬರುವ ಕಥಾ ಹಂದರ ತೀರ್ಥಹಳ್ಳಿ ಸುತ್ತಮುತ್ತಲಿನ ಗ್ರಾಮ್ಯ ಪರಿಸರ ಎಂಬ ಸ್ಪಷ್ಟ ನಿಲುವನ್ನು ನೀಡುತ್ತದೆ. ಕಾದಂಬರಿಯ ಈ ಕಥೆಯು ಸಹ್ಯಾದ್ರಿಯ ಪರ್ವತ ಶ್ರೇಣಿ ನಿಬಿಡ ಕಾನನ, ಅಲ್ಲಿನ ಕಣಿವೆಗಳ ಸಚಿತ್ರಣ ಮೂಡಿಸುತ್ತದೆ.

ಮಲೆನಾಡಿನ ದಟ್ಟಕಾಡು ಅದರಲ್ಲಿನ ಜೀವ ವೈವಿಧ್ಯತೆ ಚಿತ್ರಣ ಕೆಳಕಂಡಂತೆ ಮೂಡಿಬಂದಿದೆ. ``ಹುಲಿ ಕಲ್ಲು ಗುಡ್ಡದ ಕಾಡು`` ಆ ಕಡೆಯಲ್ಲೆಲ್ಲಾ ಅತ್ಯಂತ ದಟ್ಟವಾದುದೆಂದೂ ಜೀವಾದಿಗಳಿಗೆ ನೆಲೆಬೀಡೆಂದು ಹೆಸರು ವಾಸಿಯಾಗಿತ್ತು. ಅದರ ಕಡಿವೂ ನಿಬಿಡತೆಯೂ ಎಷ್ಟರಮಟ್ಟಿನದಾಗಿತ್ತೆಂದರೆ, ದೊಡ್ಡ ಬೇಟೆಗೆ ಹೋಗುವವರು ಈ ಕಾಡಿಗೆ ಹೋಗಲು ಹಿಂಜರಿಯುತ್ತಿದ್ದರು. ಕಡಿದಾದ ದರಿ ಕಂದರಗಳಿಂದ ದುರ್ಗಮವಾಗಿದ್ದ ಅದನ್ನು ಸೋವಲು ಹಳು ನುಗ್ಗಲಿಕ್ಕೇ ಕನಿಷ್ಟ ಪಕ್ಷ ನೂರೈವತ್ತು ಜನರಾದರೂ ಬೇಕಾಗುತ್ತಿತ್ತು. ಇನ್ನು ಬಿಲ್ಲಿಗೆ ಕೂರಲು ಕಡಿಮೆ ಎಂದರೆ 50 ರಿಂದ 60 ಕೋವಿಗಾರರಾದರೂ ಬೇಕಿತ್ತು. ಅಷ್ಟು ಕೋವಿಗಳನ್ನು ತರುವುದು ಸಾಧ್ಯವಿರಲಿಲ್ಲ. ಕೇವಲ ವರ್ಷಕ್ಕೊಮ್ಮೆ ಈ ಕಾಡಿನಲ್ಲಿ ಬೇಟೆಗೆ ತೊಡಗುತ್ತಿದ್ದರು.

ಸಹ್ಯಾದ್ರಿಯ ಮಲೆಗಳಲ್ಲಿನ ಮಲೆನಾಡು ಅಪಾರವಾದ ಸಸ್ಯ, ಪ್ರಾಣಿ, ಪಕ್ಷಿ, ಕೀಟ ಪ್ರಭೇದಗಳನ್ನು ತನ್ನಲ್ಲಿ ಒಳಗೊಂಡಿದೆ. ದಟ್ಟವಾದ ಅರಣ್ಯ ಕಡಿದಾದ ಕಣಿವೆಗಳು, ಎತ್ತರದ ಬೆಟ್ಟಗುಡ್ಡಗಳು, ಅದರಲ್ಲಿನ ಜೀವ ಸಂಕುಲದ ಅನನ್ಯತೆಗೆ ಮುಖ್ಯ ಕಾರಣ ಅಲ್ಲಿನ ಭೌಗೋಳಿಕ ಪರಿಸರ ಮತ್ತು ಎಡೆಬಿಡದೆ ಸುರಿವ ಮಳೆ. ಕಾದಂಬರಿಯಲ್ಲಿ ಮಲೆನಾಡಿನ ಮಳೆಯನ್ನು ಹಲವಾರು ಬಾರಿ ಕುವೆಂಪುರವರು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾರೆ. ಪುಟ 2 ರಲ್ಲಿ ಉಲ್ಲೇಖಿತವಾಗಿರುವಂತೆ, ``ಗುತ್ತಿ ಸೀತೂರು ಗುಡ್ಡಕ್ಕೆ ಏರಲು ಮೊದಲು ಮಾಡಿದಾಗ ಬೈಗುಗಪ್ಪಿನೊಂದಿಗೆ ಮುಗಿಲುಗಪ್ಪು ಮುಸುಕಿ ಮಿಣುಕು ಹುಳುಗಳ ಮಿನುಗು ಕಾಣತೊಡಗಿತು. ಜೀರುಂಡೆಗಳ ಕೂಗು ಚಿಟ್ಟು ಹಿಡಿಸುತ್ತಿತ್ತು. ಮಳೆಗಾಲ ಪ್ರಾರಂಭ ಸಮಯವಾಗಿದ್ದರೂ ಮಲೆನಾಡು ಭಯಂಕರವಾಗಿದ್ದ ಸಿಂಬಾವಿ, ಸೀತೂರು, ಲಕ್ಕುಂದ ಈ ಕಾಡುಗಳಲ್ಲಿ ಇಂಬಳದ ಕಾಟವೂ ಹೆಚ್ಚಾಗಿಯೇ ಶುರುವಾಗಿತ್ತು. ಗುತ್ತಿ ಅಲ್ಲಲ್ಲಿಯೇ ನಿಂತು ಕಣ್ಣಿಗೆ ಕಂಡ ಇಂಬಳಗಳನ್ನು ಕಾಲಿನಿಂದ ಕಿತ್ತೊಗೆಯುತ್ತಾ ಬಿರಬಿರನೆ ಸೀತೂರು ಗುಡ್ಡದ ಹಳು ಹಿಡಿದ ಕಾಡುದಾರಿಯಲ್ಲಿ ಮುಂದುವರಿದನು``.

ಈ ಮೇಲಿನ ಪುಟದಲ್ಲಿ ಇಂಬಳಗಳ ಕಾಟ ಹೆಚ್ಚಾಗಿದ್ದನ್ನು ತೋರಿಸಿದರೆ ಇಂಬಳಗಳು ತೇವಾಂಶ ಅಧಿಕವಿರುವೆಡೆ, ಮಳೆಗಾಲದಲ್ಲಿ ಮಾತ್ರ ಕಂಡು ಬರುತ್ತವೆ. ಇಂಬಳ (Leech) ಹಿರಡನೇರಿಯಾ ಗುಂಪಿಗೆ ಸೇರಿದ ಪರಾವಲಂಬಿಗಳು. ಇವು ದನ, ಎಮ್ಮೆ, ಕುರಿ, ಮನುಷ್ಯರನ್ನೊಳ ಗೊಂಡಂತೆ ಇತರ ಸಸ್ತನಿಗಳ ದೇಹಕ್ಕೆ ಕಚ್ಚಿಕೊಂಡು ಆ ಪ್ರಾಣಿಯ ದೇಹದಿಂದ ತಮಗೆ ಸಾಕಾಗುವಷ್ಟು ರಕ್ತ ಹೀರಿಕೊಂಡು ನಂತರ ಕೆಳಗೆ ಬಿದ್ದು ಹೋಗುತ್ತವೆ. ಸಸ್ತನಿಗಳ ರಕ್ತವೇ ಆಹಾರ ಮತ್ತು ಶಕ್ತಿಯ ಮೂಲ. ಇಲ್ಲಿ ಜೀವಿ, ಜೀವಿಯೊಂದರ ಮೇಲಿನ ಅವಲಂಬನೆಯ ಪರಿಕಲ್ಪನೆ ಕಂಡು ಬರುತ್ತದೆ.

ಕುವೆಂಪು ತಮ್ಮ ಕಾದಂಬರಿಯಲ್ಲಿ ತಾವು ಕಂಡ ಸಮಸ್ತ ಜೀವಚರಗಳನ್ನು ಬಳಸಿಕೊಂಡು ಕಥಾಹಂದರವನ್ನು ನೇಯ್ದಿದ್ದಾರೆ. ಇದು ಅವರು ಜಗತ್ತನ್ನು ನೋಡುವ ದೃಷ್ಟಿಯನ್ನು ಸಮರ್ಥಿಸುತ್ತದೆ. ಕವಿಯಾದರೂ ಕುವೆಂಪು ಪರಿಸರವನ್ನು ಕೂಲಂಕಷವಾಗಿ ಅಧ್ಯಯನ ಮಾಡಿ ತಮ್ಮ ಅನುಭವದ ಮೂಲಕ ವಿವರಿಸಿದ್ದಾರೆ.

ಕಾದಂಬರಿಯಲ್ಲಿ ಬರುವ ಮಾನವ ಪಾತ್ರಧಾರಿಗಳು ಮೂಲತ:ವಾಗಿ ಕೃಷಿಕರಾಗಿ ದ್ದರು, ಅವರ ಅಂದಿನ ಸಹಜ ಬದುಕು, ಅವರ ಜೀವನದಲ್ಲಿ ಹಾಸುಹೊಕ್ಕಾಗಿದ್ದ ಸಮಸ್ತ ಪ್ರಾಣಿ ಪ್ರಪಂಚದ ಪರಿಚಯ ಮಾಡಿಸಿದ್ದಾರೆ. ಸಾಕು ಪ್ರಾಣಿಗಳಾದ ಹಸು, ಎಮ್ಮೆ, ಕೋಣ, ಹಂದಿ, ನಾಯಿ, ಕೋಳಿ ಇತ್ಯಾದಿಗಳಷ್ಟೇ ಅಲ್ಲದೇ ಕಾಡಿನ ಪಕ್ಷಿಗಳು ಮೀನು, ವನ್ಯಮೃಗಗಳ ಪ್ರಸ್ಥಾಪ ಕಾದಂಬರಿಯಾದ್ಯಂತ ಕಂಡು ಬರುತ್ತದೆ. ಅದರೊಂದಿಗೆ, ಸಸ್ಯಗಳ ಸ್ಥಳೀಯ ಹೆಸರುಗಳೊಂದಿಗೆ ಅವುಗಳ ಉಪಯೋಗಗಳು ಮತ್ತು ಮಾನವರೊಂದಿಗಿನ ಸಂಬಂಧದ ನಂಟನ್ನೂ ಅವರು ತೀಕ್ಷ್ಣವಾಗಿ ಗಮನಿಸಿ ಇದರಿಂದಾಗಿ ಸವಿಸ್ಥಾರವಾಗಿ ವಿವರಿಸಿದ್ದಾರೆ.

ಪ್ರಕೃತಿಯ ವರ್ಣನೆಯನ್ನು ಕುವೆಂಪು ಕಾದಂಬರಿಯಲ್ಲಿ ಹೆಚ್ಚಾಗಿಕಾಣಬಹುದು.ಸ್ವತ:ಮಲೆನಾಡಿನಲ್ಲಿ ಜನಿಸಿ ಪ್ರಕೃತಿಯ ಮಡಿಲಲ್ಲಿ ಬೆಳೆದ ಕುವೆಂಪು ಗಾಢವಾಪ್ರೀತಿಸುತ್ತಿದ್ದುದುಪ್ರಕೃತಿಯನ್ನು ಎಂಬುದು ಕಂಡು ಬರುತ್ತದೆ.

ಪ್ರಕೃತಿಯನ್ನು ವರ್ಣಿಸುವ ನಿಟ್ಟಿನಿಂದ ಇವರು ವರ್ಡ್ಸ್‌ವರ್ತ್‌ನಿಗೆ ಸಮನಾಗುತ್ತಾರೆ. ಪ್ರಕೃತಿ ಒಬ್ಬ ವ್ಯಕ್ತಿಯ ವ್ಯಕ್ತಿತ್ವ ನಿರ್ಮಾಣದಲ್ಲಿ ಮುಖ್ಯ ಪಾತ್ರ ವಹಿಸುತ್ತದೆ ಎಂಬುದಕ್ಕೆ ವಿಶ್ವ ಮಾನವತ್ವವನ್ನು ಸಾರಿದ ರಾಷ್ಟ್ರಕವಿ ಕುವೆಂಪು ಉತ್ತಮ ನಿದರ್ಶನ.

ಕುವೆಂಪುರವರ ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಮಾನವ ಪ್ರಕೃತಿಯ ಸಂಬಂಧವನ್ನು ಜೀವಂತವಾಗಿ ಮೂಡಿಸಿದರೆ, ಮಲೆಗಳಲ್ಲಿ ಮದುಮಗಳು ಕಾದಂಬರಿಯಂತೂ ಪ್ರಕೃತಿಯೇ ತಾನಾಗಿದೆ. ಪ್ರಕೃತಿಯಲ್ಲಿ ಕಂಡುಬರುವ ಜೀವಸಂಕುಲದ ಬಗ್ಗೆಯಷ್ಟೇ ಕುವೆಂಪು ಗಮನ ಸೆಳೆಯುವುದಿಲ್ಲ. ಅದರೊಂದಿಗೆ, ಅಲ್ಲಿನ ಸ್ಥಳೀಯರ ಜನಜೀವನ, ವ್ಯವಸಾಯವನ್ನವಲಂಬಿಸಿದ ಬದುಕು ಕೃಷಿ ವಿಧಾನಗಳು ಸಾಮಾನ್ಯವಾಗಿ ಬೆಳೆಯಲ್ಪಡುತ್ತಿದ್ದ ಬೆಳೆಗಳು, ವ್ಯವಸಾಯಕ್ಕಾಗಿ ಬಳಸಲಾಗುತ್ತಿದ್ದ ಪ್ರಾಣಿಗಳು ಇತ್ಯಾದಿಗಳ ಪರಿಚಯವನ್ನು ಮಾಡಿಸುತ್ತಾರೆ.

ಪ್ರತಿಯೊಂದು ಘಟ್ಟದಲ್ಲೂ ಪ್ರಕೃತಿ ಕಾದಂಬರಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಜನಸಂಖ್ಯೆ ತೀರಾ ವಿರಳವಾಗಿದ್ದ ತೀರ್ಥಹಳ್ಳಿ ಹಾಗು ಸುತ್ತಮುತ್ತಲ ಗ್ರಾಮ್ಯ ಪರಿಸರದ ಸುತ್ತಲೇ ತಿರುಗುವ ಇವರ ಕಾದಂಬರಿಯಲ್ಲಿ, ನಗರದಲ್ಲಿರುವಂತೆ ಒಂದೆಡೆಯಲ್ಲೇ ಮನೆಗಳಾಗಲಿ ಇರಲಿಲ್ಲ.

ಕಾದಂಬರಿಯಾದ್ಯಂತ ಮಲೆನಾಡಿನಲ್ಲಿ ಸರ್ವೇ ಸಾಮಾನ್ಯವಾಗಿ ಸುರಿಯುವ ಮುಂಗಾರು ಮಳೆಯ ಆರ್ಭಟವನ್ನು ವರ್ಣಿಸಲಾಗಿದೆ. ಮಳೆ ಆರಂಭವಾಗುವ ಮಾದಲು ವಾತಾವರಣದಲ್ಲಾಗುವ ಬದಲಾವಣೆಗಳನ್ನು ಕೂಲಂಕಷವಾಗಿ ವಿವರಿಸುತ್ತಾರೆ. ಇದರೊಂದಿಗೆ ಮಳೆ ಧರೆಗಿಳಿದು ಬರುವುದನ್ನು, ನಂತರ ಪ್ರಕೃತಿಯಲ್ಲಿ ಕಂಡು ಬರುವ ಸೌಂದರ್ಯವನ್ನು ಮರ,ಗಿಡ,ಬಳ್ಳಿಗಳ ಎಲೆ, ಹೂವು,ಕಾಯಿಗಳು ಕಂಗೊಳಿಸುವುದನ್ನು ಸಹ ಬಣ್ಣಿಸುತ್ತಾರೆ.

ಈ ಮೇಲಿನ ವಾಕ್ಯವನ್ನು ಸಮರ್ಥಿಸುವ ಉಲ್ಲೇಖವೊಂದು ಮಲೆಗಳಲಿ ಮದುಮಗಳು ಕಾದಂಬರಿಯಲ್ಲಿ ಕಂಡು ಬರುತ್ತದೆ. ``ಗುತ್ತಿ ಇನ್ನು ಸೀತೂರು ಗುಡ್ಡದ ನೆತ್ತಿಗೇರಿರಲಿಲ್ಲ. ಗಾಳಿ ಪ್ರಾರಂಭವಾಗಿ ಕಾಡು ಹೋ ಎನ್ನತೊಡಗಿತು, ಮುಗಿಲು ಮೊಳಗಿತು, ಮಿಂಚಿತ್ತು. ಮೊದ ಮೊದಲು ಅಲ್ಲೊಂದಿಲ್ಲೊಂದು ತೋರ ಹನಿ ಮರದೆಲೆಯ ಮೇಲೆ ಬಿದ್ದ ಸದ್ದಾಯಿತು. ಗುತ್ತಿ ಹೆಗಲ ಮೇಲಿದ್ದ ಕಂಬಳಿ ಕೊಪ್ಪೆಯನ್ನು ಬೇಗ ಬೇಗನೇ ತೆಗೆದು ಸೂಡಿಕೊಳ್ಳುತ್ತಿದ್ದಾಗಲೇ, ಮುಂಗಾರು ಮಳೆ ಕಾಡೆಲ್ಲಾ

ಕಂಗಾಲಾಗುವಂತೆ ದನಗೋಳಾಗಿ ಸುರಿಯ ತೊಡಗಿತು``. ಈ ರೀತಿ ಕುವೆಂಪು ಮಲೆನಾಡಿನ ಮಳೆಯ ಚಿತ್ರಣ ಮೂಡಿಸುತ್ತಾರೆ. ( ಪುಟ 3-4, ಮಲೆಗಳಲ್ಲಿ ಮದುಮಗಳು).

ಅಂದು ಮಲೆನಾಡಿನಲ್ಲಿ ಮಳೆ ತೀರಾ ಭಯಂಕರವಾಗಿ ಸುರಿಯುತ್ತಿತ್ತು. ಕಾಲಕ್ಕನುಗುಣವಾಗಿ ಪ್ರಕೃತಿಯ ಋತುಚಕ್ರ ತಿರುಗುತ್ತಿತ್ತು, ಕೆಲವೊಮ್ಮೆ ಅತಿವೃಷ್ಟಿಗೂ ಕಾರಣವಾಗುತ್ತಿತ್ತು.ಮಳೆಗಾಲದಲ್ಲಿ ಜನರು ಒಂದೆಡೆಯಿಂದ ಮತ್ತೊಂದೆಡೆಗೆ ಅಷ್ಟು ಸುಲಭವಾಗಿ ಪ್ರಯಾಣಿಸಲು ಸಾಧ್ಯವಾಗುತ್ತಿರಲಿಲ್ಲ. ಅವರ ವಸತಿ ಪ್ರದೇಶದ ಸುತ್ತಲೂ ನೀರು ನಿಂತು ಹಳ್ಳ ಕೊಳ್ಳ, ಕೆರೆ, ನದಿಗಳು ತುಂಬಿಹರಿದು, ಒಂದು ದ್ವೀಪದ ಪರಿಕಲ್ಪನೆ ಮೂಡಿಸುತ್ತದೆ.

ಕೆಲವೊಮ್ಮೆ ಮಳೆ ಹೆಚ್ಚಾಗಿ ಮನೆ, ಗುಡಿಸಲು, ಕೊಟ್ಟಿಗೆಗಳಿಗೂ ನೀರು ತುಂಬಿ ಕೊಳ್ಳುವುದನ್ನು ಕುವೆಂಪು ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಗದ್ದೆಗಳಿಗೆ ಹೆಚ್ಚು ನೀರು ನುಗ್ಗಿ ಅಲ್ಲಿ ತುಂಬಿ ಹರಿಯುವಾಗ ಹೊಸ ನೀರಿಗೆ ಮೀನುಗಳು ಗದ್ದೆಗೆ ಬರುತ್ತಿದ್ದವು. ಇದನ್ನು ಹತ್ತು ಮೀನು ಎನ್ನುತ್ತಾರೆ. ಮಳೆಗಾಲದಲ್ಲಿ ರಾತ್ರಿಯ ಕತ್ತಲಿನಲ್ಲಿ ಕೂಡ ಮಲೆನಾಡ ಜನರು ಲಾಟೀನು ಮತ್ತು ಮೀನು ಹಿಡಿಯುವ ಸಲಕರಣೆಗಳೊಂದಿಗೆ ಗದ್ದೆಗಿಳಿದು ಮೀನು ಹಿಡಿಯುತ್ತಿದ್ದರು. ತರಕಾರಿಗಳು ಅಷ್ಟಾಗಿ ಲಭ್ಯವಿರದಿದ್ದ ಕಾಲದಲ್ಲಿ ಇಲ್ಲಿನ ಜನರಿಗೆ, ಆಹಾರ ಖಾದ್ಯವಾಗಿ ಈ ಮೀನುಗಳು ಬಹು ಉಪಯೋಗಿಯಾಗುತ್ತಿದ್ದವು. ಗದ್ದೆಗಳಲ್ಲಿ ನೀರಿನ ಹರಿವು ಹೆಚ್ಚಾಗಿರುವೆಡೆಗಳಲ್ಲಿ ಕೂಣಿ ಹಾಕಿ ಮೀನು ಹಿಡಿಯುತ್ತಿದ್ದರು. ನಂತರ ಪುಟ್ಟಿಗಳಲ್ಲಿ ಅವುಗಳನ್ನು ತುಂಬಿಕೊಂಡು ಮನೆಗಳಿಗೆ ತರುತ್ತಿದ್ದರು.

ಇದನ್ನು ಸಮರ್ಥಿಸುವ ಉಲ್ಲೇಖ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿದೆ. ಗುತ್ತಿ ಲಕ್ಕುಂದದ ಸಮೀಪ ನಡೆದು ಹೋಗುತ್ತಿದ್ದಾಗ, ``ಹಳ್ಳದ ಅಂಚಿಗೆ ಬಂದು ನಿಂತು ನೋಡಿದಾಗ ಕತ್ತಲೆಯಲ್ಲದೆ ಮತ್ತೇನೂ ಕಾಣಿಸಲಿಲ್ಲ. ನೀರಿನ ಭೋರಾಟದಿಂದ ಹಳ್ಳದ ಏರಿಕೆಯನ್ನು ಊಹಿಸುತ್ತಾ ನಿಂತಿದ್ದಾಗ, ಒಂದು ಸಾರಿ ಮಿಂಚಿತು. ವೈರಿದಳದ ಮೇಲೆ ರಭಸದಿಂದ ದಾಳಿ ನುಗ್ಗುವ ತುರಂಗ ಸೇನೆಯಂತೆ ಉನ್ಮತ್ತ ವೇಗದಿಂದ ಹರಿದೋಡುತ್ತಿದ್ದ ತೊರೆಯ ತೆರೆಗಳು ಪಳಪಳನೆ ಮಿಂಚಿದವು. ಹೊನಲಿನ ಮಧ್ಯೆ
ವೇಗವಾಗಿ ಹೋಗುತ್ತಿದ್ದ ಮರದ ತುಂಡುಗಳು ಅದರ ರಭಸಕ್ಕೆ ಸಾಕ್ಷಿಯಾಗಿದ್ದವು. ಬೇಸಿಗೆಯಲ್ಲಿ ಒಂದೆರಡು ಅಡಿಗಲಗಲವಾಗಿರುತ್ತಿದ್ದ ಆ ಹಳ್ಳ ಈಗ ಸುಮಾರು 25-30 ಅಡಿಗಳಷ್ಟು ಅಗಲವಾಗಿ ಹರಿಯುತ್ತಿತ್ತು``.

ಹೊಳೆ ಅಷ್ಟು ರಭಸವಾಗಿ ಹರಿಯುವಾಗ ಸ್ಥಳೀಯರು ಆ ಕಾರ್ಗತ್ತಲಲ್ಲಿ ಲಾಟೀನು ಹಿಡಿದುಕೊಂಡು ಗದ್ದೆ ಕೋಗಿನ ಬಡ್ಡುಗಳಿಗಿಳಿಯುತ್ತಿದ್ದರು.

ಕುವೆಂಪು ಕಾದಂಬರಿಯಾದ್ಯಂತ ಮಳೆಯ ವರ್ಣನೆ ಕಂಡುಬರುತ್ತದೆ. ಈ ಕುರಿತಾದ ಉಲ್ಲೇಖಗಳನ್ನು ``ಆಲಿಸಯ್ಯ ಮಲೆಯ ಕವಿ`` ಪುಸ್ತಕದಲ್ಲಿ ಶ್ರೀ.ವಿ.ಚಂದ್ರಶೇಖರ ನಂಗಲಿಯವರು ಪ್ರಸ್ತಾಪಿಸಿದ್ದಾರೆ.

- "ಮಳೆಗಾಲದ ಪ್ರಾರಂಭ ಸಮಯವಾಗಿದ್ದರೂ ಮಲೆನಾಡು ಭಯಂಕರವಾಗಿದ್ದ ಸಿಂಭಾವಿ, ಸೀತೂರು, ಲಕ್ಕುಂದ ಈ ಕಡೆಗಳಲ್ಲಿ ಇಂಬಳದ ಕಾಟವೂ ಹೆಚ್ಚಾಗಿಯೇ ಶುರುವಾಗಿತ್ತು``. (ಪುಟ-2, ಮಲೆಗಳಲ್ಲಿ ಮದುಮಗಳು).

- ``ಮಳೆಗಾಲದ ಮೊದಲ ಪಾದದ ಪೂರ್ವಾಹ್ನದ ಆಕಾಶದಲ್ಲಿ ಮೋಡ ವಿರಳವಾಗಿದ್ದು, ಬಟ್ಟ ಬಯಲಾಗಿದ್ದ ಕಲ್ಲರೆಯ ಮೇಲೆ ಬಿಸಿಲು ಚೆನ್ನಾಗಿಯೇ ಬೀಳುತ್ತಿತ್ತು``. (ಪುಟ-68)

- ``ಹಿಂದಿನ ದಿನ ಬಿರುಗಾಳಿ ಮಳೆಯಲ್ಲಿ ಉರುಳಿ ಅಡಿಕೆ ಮರಗಳ ಮೇಲೆ ಬಿದ್ದಿದ್ದ ಒಂದು ದೊಡ್ಡ ಮುದಿ ಅತ್ತಿಯ ಮರವನ್ನು ಸವರಿ ಕಡಿಯುವ ಕೆಲಸದಲ್ಲಿ ತೊಡಗಿದ್ದರು``. (ಪುಟ-119)

- ``ಹೊತ್ತು ಆಗಲೇ ಇಳಿಯತೊಡಗಿ ಕುಂದದ ಹೆಗ್ಗುಡ್ಡದ ನೆತ್ತಿ ನೆರಳು ಕಣಿವೆಯ ಕಾಡುಗಳ ಮೇಲೆ ಬಿದ್ದಿತ್ತು. ಹಿಂದಿನ ದಿನದ ಹೆಮ್ಮಳೆಯಲ್ಲಿ ತೊಯ್ದ ಕಾಡಿನ ಹಸುರು ಅಲ್ಲಲ್ಲಿ ಕೆಂಬಿಸಿಲಿನ ರಂಗಿನಲ್ಲಿ ಸುಮನೋಹರವಾಗಿ ಮನಮೋಹಿಸುವಂತಿತ್ತು`` (ಪುಟ 167)

- ``ಹಕ್ಕಿಗಳ ಉಲಿಹವಾಗಲಿ ಹೂವುಗಳ ಬಣ್ಣವಾಗಲಿ, ಹಸುರಿನಲ್ಲಿ ಸೋಸಿ ಬರುತ್ತಿದ್ದ ಪೂರ್ವಾಹ್ನದ ಬಿಸಿಲಿನ ಬೆಚ್ಚನೆಯ ಸುಖವಾಗಲಿ, ಆಕಾಶದಲ್ಲಿ ತೇಲುತ್ತಿದ್ದ ಮುಮ್ಮಳೆಗ ಾಲದ ಮೋಡಗಳ
ಚೆಲುವಾಗಲಿ ಯಾವುದಕ್ಕೂ ಅವನ ಒಳಮನಸ್ಸಿನ ವಲಯಕ್ಕೆ ಪ್ರಜ್ಞಾಪೂರ್ವಕವಾದ ಪ್ರವೇಶ ವಿರಲಿಲ್ಲ``. (ಪುಟ-401)

- ``ಐತ ಮರದ ಮೇಲೆ ಕುಳಿತಿದ್ದಾಗಲೆ ದೂರ ಪಶ್ಚಿಮ ದಿಗಂತದತ್ತ ಮೋಡ ಕವಿದು ಮಿಂಚುತ್ತಿತ್ತು. ಅವನು ಬಿಡಾರ ಸೇರುವ ಹೊತ್ತಿಗಾಗಲೇ ಮುಗಿಲು ಮುಚ್ಚಿ, ಮಿಂಚು ಗುಡು ಗು ಸಿಡಿಲು ಪ್ರಾರಂಭವಾಗಿ ಗಾಳಿ ಜೋರಾಗಿ ಬೀಸಿ ಮಳೆಯ ತೋರ ಹನಿ ಚಪ್ಪಟಪ್ಪನೆ ವಿರಳವಾಗಿ ಬೀಳತೊಡಗಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಮುಂಗಾರು ಮಳೆ ಬೋರೆಂದು ಹೊಯ್ದು ಅರ್ಧ ಗಂಟೆಯೊಳಗೆ ನಿಂತು ಬಿಟ್ಟಿತು``. (ಪುಟ - 430)

- ``ಆ ದಿನ ಮಳೆ ಬೆಳಗಿನಿಂದಲೂ ಹಿಡಿದು ಹೊಡೆಯಲು ಪ್ರಾರಂಭವಾಗಿ ಇಡಿಯ ದಿನವೆಲ್ಲ ಜಡಿ ಸುರಿದಿದ್ದರಿಂದ ಹೊರಡಲಿಲ್ಲ. ಹಳ್ಳಿಯ ಜನರು ಅಂತೂ ಮಳೆ ಕೂತ್ಹಾಂಗೆ ಆತು! ಎಂದುಕೊಂಡಿದ್ದರು. ಮುಗಿಲ ಕಡೆ ನೋಡಿ`` (ಪುಟ - 475)

- ``ಬೇಸರ! ಬೇಸರ! ಬೇಸರ! ಜಿರಯ್ಯೋ ಎಂದು ಮಳೆ ಹೊಡೆಯುತ್ತಿದೆ``.

- ``ಮಳೆಗಾಲ ನಿಲ್ಲುತ್ತದೆಯೇ? ಮಳೆ ಹಿಡಿದು ಕೂತಿತ್ತು. ನಾಲ್ಕು ಪಾದಗಳನ್ನು ಬಲವಾಗಿ ಊರಿ`` (ಪುಟ-503)

- ``ಮಲೆನಾಡಿನ ಮಳೆಗಾಲದ ಜಡಿಮಳೆ ಸುರಿಯುತ್ತಿತ್ತು`` (ಪುಟ-529)

- ``ಭೋರ್ಭೋರ್ಭೋರ್‌ರೆಂದು ಆಷಾಢದ ಮಳೆ ಸುರಿಯುತ್ತಿತ್ತು`` (ಪುಟ - 539)

- ``ಮಳೆಗಾಲವಾದ್ದರಿಂದಲೂ ಮಳೆ ಸುರಿಯುತ್ತಲೇ ಇದ್ದುದರಿಂದಲೂ`` .(ಪುಟ 599)

- ``ಯಾಕೆ ಹೀಗೆ ಸುರಿಯುತ್ತಿದೆ ಮಳೆ? ಇವತ್ತೇ ? ಈ ಮಳೆ ಹೀಗೇ ಬೀಳುತ್ತಿದ್ದರೆ ಗತಿ ? ನನ್ನನ್ನು ಹೇಗೆ ತಪ್ಪಿಸಿಕೊಂಡು ಹೋಗುತ್ತಾರೋ ಮುಕುಂದಭಾವ``?.

- ``ಮಳೆ ಬೀಳುತ್ತಿದ್ದ ಸದ್ದನ್ನು ಆಗಾಗ ಭಂಗಿಸುತ್ತಿದ್ದ ಸದ್ದು ಎಂದರೆ ನುಸಿಗಳನ್ನು ರಪ್ಪನೆ ಹೊಡೆದುಕೊಳ್ಳುತ್ತಿದ್ದ ಸದ್ದು`` (ಪುಟ - 661).

ಶಿವಮೊಗ್ಗ ಜಿಲ್ಲೆಯ ಮಲೆನಾಡು ಪ್ರದೇಶಗಳ ದಟ್ಟಡವಿಗಳ ಭಾಗಗಳಲ್ಲಿ ಹೆಚ್ಚು ಮಳೆಯಾಗುತ್ತದೆ.

ಆಗುಂಬೆಯಲ್ಲಿ ಅತ್ಯಂತ ಹೆಚ್ಚುಮಳೆಯಾಗುತ್ತದೆ. ಪಶ್ಚಿಮ ಘಟ್ಟಗಳ ಉದ್ದಕ್ಕೂ ನಿತ್ಯ ಹಸುರಿನಿಂದ ಕೂಡಿದ ಕಾಡುಗಳಿವೆ. ಇಲ್ಲಿನ ದಟ್ಟಡವಿಗಳಲ್ಲಿ ಬಿದಿರು, ತೇಗ, ಹೊನ್ನೆ, ಶ್ರೀಗಂಧ, ಸಾಲ್ ಮೊದಲಾದ ಮರಗಳು ಮರಮುಟ್ಟುಗಳನ್ನು ಒದಗಿಸಿದರೆ, ಭತ್ತ, ಏಲಕ್ಕಿ, ಬಾಳೆ, ಮೆಣಸು, ಗೋಡಂಬಿಗಳು ಸಾಮಾನ್ಯವಾಗಿ ಬೆಳೆಯಲ್ಪಡುವ ಬೆಳೆಗಳು.

ಕಾಡುಕೋಣ, ಹುಲಿ, ಆನೆ, ಜಿಂಕೆ, ಡೊಂಕು ಕೊಂಬಿನ ನೀಲಗಿರಿ ಕಾಡುಕುರಿ ಇಲ್ಲಿನ

ಅರಣ್ಯಗಳಲ್ಲಿ ಕಂಡು ಬರುವ ವನ್ಯಜೀವಿಗಳು. ಕಾನನದಲ್ಲಿ ಹೇರಳವಾಗಿ ಕಂಡು ಬರುವ ಪಕ್ಷಿ ಪ್ರಭೇದಗಳು ಇಲ್ಲಿನ ಪ್ರಕೃತಿಯ ಸೌಂದರ್ಯವನ್ನು ಇಮ್ಮಡಿ ಗೊಳಿಸಿವೆ. ಪಶ್ಚಿಮ ಘಟ್ಟಗಳಲ್ಲಿನ ಕಾಡುಗಳಲ್ಲಿ ಒಟ್ಟಾರೆ ಕಂಡು ಬಂದಿರುವ ಪಕ್ಷಿಪ್ರಭೇದಗಳ ಸಂಖ್ಯೆ.119.

ಪಶ್ಚಿಮ ಘಟ್ಟಗಳಲ್ಲಿ ಮಾತ್ರವೇ ಕಂಡು ಬರುವ ಕಂದು ಚುಕ್ಕಿಬೆಕ್ಕು (Rusty spotted cat), ಕಬ್ಬೆಕ್ಕುಗಳು (Sewates), ಪಟ್ಟೆ ಕತ್ತಿನ ಮುಂಗಸಿ (Stripnected Mongoose), ಕಂದು ಬಣ್ಣದ ಕಾಡಳಿಲು (Grigald goint squisl), ನೀಲಗಿರಿ ಕಾಡುಕುರಿ (Nilgiri Tahar), ಸಿಂಗಳೀಕ (Lion tailed mecack), ನೀಲಗಿರಿ ಮುಸುವ (Nilgiri Langoor), ಪ್ರಪಂಚದ ಬೇರಾವ ಪ್ರದೇಶದಲ್ಲೂ ಕಂಡು ಬರದ ಪಶ್ಚಿಮ ಘಟ್ಟಗಳಿಗೆ ಮಾತ್ರ ಸೀಮಿತವಾದ ವನ್ಯ ಜೀವಿಗಳು.

ಕುವೆಂಪು ಕಾದಂಬರಿಗಳಲ್ಲಿ ಉಲ್ಲೇಖಿತವಾಗಿರುವ ಕಾಡು ಸಹ ಈ ವ್ಯಾಪ್ತಿಯೊಳಗೆ ಬರುತ್ತದೆ. ಸಹ್ಯಾದ್ರಿಯ ದಟ್ಟಕಾಡುಗಳು, ಎತ್ತರದ ಮರಗಳು, ಅದನ್ನು ಮೀರಿ ಬೆಳೆದ ಮರಗಳು. ಅಲ್ಲಿನ ವನ್ಯ ಜೀವಿಗಳು ತಮ್ಮ ಬಿಡುವಿನ ಸಮಯದಲ್ಲಿ ಆ ದಟ್ಟ ಅರಣ್ಯದಲ್ಲಿ ಗುಂಪಾಗಿ ಬೇಟೆಗೆ ಹೋಗುತ್ತಿದ್ದುದ್ದು ವಾಡಿಕೆ. ಬೇಟೆಯ ಬಗ್ಗೆ ರಸವತ್ತಾಗಿ ಬಣ್ಣಿಸುವ ಕುವೆಂಪು ಸ್ವತ: ಬೇಟೆಯನ್ನು ಇಷ್ಟಪಡುತ್ತಿದ್ದರು.

ಬೇಟೆಗೆ ಹೊರಡುವ ಇಲ್ಲಿನ ಜನರ ತಯಾರಿಯನ್ನು ಮಕ್ಕಳ ಕುತೂಹಲವನ್ನು ಸಹ ವಿವರಿಸುವ ಕುವೆಂಪು ಕಾಡಿನ ಪ್ರಾಣಿಗಳ ಬಗ್ಗೆಯೂ ಮಾಹಿತಿ ನೀಡುತ್ತಾರೆ. ಈ ಹೇಳಿಕೆಯನ್ನು ಸಮರ್ಥಿಸುವ ಉಲ್ಲೇಖ ಈ ರೀತಿ ಇದೆ. `` ಒಮ್ಮೆ ಸಾರಿಕೆ ಬೇಟೆಗೆ ಹೋಗಿದ್ದರಂತೆ ದಟ್ಟ ಕಾಡಿನ ನಡುವೆ ಒಂದು ಕಳುಂಪೆಯ ಪಕ್ಕದ ಹೊದರಿನಲ್ಲಿ ಆಗ ತಾನೆ ಹುಟ್ಟಿದುವೋ ಅಥವಾ ಹುಟ್ಟಿ ಕೆಲವೇ ಗಂಟೆಗಳಾಗಿದ್ದಿರಬಹುದು ಗೊತ್ತಿಲ್ಲ. 3 ಪುಟ್ಟ ಹುಲಿ ಮರಿಗಳಿದ್ದವಂತೆ``. ಹುಲಿಯ ವಾಸಸ್ಥಾನವಾದ ಆ ಕಾಡಿನ ನಿಬೀಡತೆ ಮತ್ತು ಅಲ್ಲಿದ್ದಿರಬಹುದಾದ ಪ್ರಾಣಿ ಸಂಕುಲದ ಮಾಹಿತಿಯನ್ನು ನೀಡುತ್ತಾರೆ. (ಪುಟ-266 ಮಲೆಗಳಲ್ಲಿ ಮದುಮಗಳು) .

ಕುವೆಂಪು ಮಲೆನಾಡಿನಲ್ಲಿ ಪ್ರಪ್ರಥಮವಾಗಿ ಕ್ರೈಸ್ತ ಮಿಶನರಿಗಳು ಶಾಲೆ ಆರಂಭಿಸಿದ ಪ್ರದೇಶ ದಟ್ಟವಾದ ಕಾಡಿಗೆ ಹೊಂದಿಕೊಂಡಿದ್ದು, ಜನರ ನಿಬಿಡತೆ ಕಡಿಮೆ ಇದ್ದುದರಿಂದ ಅನೇಕ ಪ್ರಾಣಿಗಳು ಅಲ್ಲಿ ಸಂಚರಿಸುತ್ತಿದ್ದವು. ಪಶ್ಚಿಮ ಘಟ್ಟಗಳಲ್ಲಿನ ಕಾಡುಗಳಲ್ಲಿ ಕಾಣಸಿಗುವ ಪ್ರಾಣಿ ವೈವಿಧ್ಯದ ಇರುವಿಕೆಯನ್ನು ದೃಢಪಡಿಸುವ ಉಲ್ಲೇಖ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಹೀಗೆ ಮೂಡಿ ಬಂದಿದೆ.

``ನಾನು ಹೇಳಲಿಲ್ಲವೆ ನಿಮಗೆ ಪಾತ್ರಿಗಳೇ ಈ ಕಾಡಿನಲ್ಲಿ ಇಸ್ಕೂಲು ಮಾಡಿದರೆ ಕಾಡು ಪ್ರಾಣಿಗಳೇ ಸೈ ಓದಲಿಕ್ಕೆ ಬರುವುದು ಎಂದು``. (ಪುಟ-281 ಮಲೆಗಳಲ್ಲಿ ಮದುಮಗಳು).

ಕುವೆಂಪು ಕಂಡಿದ್ದ ಕಾಡು ಜನರ ಜೀವನ ಶೈಲಿ, ಅದರಲ್ಲಿ ಹಾಸುಹೊಕ್ಕಾಗಿದ್ದ ಪ್ರಾಣಿ ಹಾಗು ಪಕ್ಷಿ ಪ್ರಪಂಚದ ಮಾಹಿತಿಯು ಅವರ ಕಾದಂಬರಿಯಲ್ಲಿ ಲಭ್ಯವಾಗುತ್ತದೆ. ಕಾಡಿನಲ್ಲಿ ಮಾನವರು ಸಂಚರಿಸುವಾಗಲೋ ಬೇಟೆಗೆ ತೊಡಗಿದ್ದಾಗಲೋ ಕಣ್ಣಿಗೆ ಬೀಳುವ ಪ್ರಾಣಿಗಳಾದ ಮಿಗ, ಕಡ, ಕುರ್ಕ, ಬರ್ಕ್, ಮೊಲ, ಮುಂಗುಸಿ, ಕಣಿ ಹಂದಿ, ಚಿರತೆ, ಹುಲಿ, ಹಂದಿ, ಉಡ, ಓತಿ, ಹಲವಾರು ಜಾತಿಯ ಮೀನುಗಳ ಆವಾಸದ (habitat) ಹಿನ್ನೆಲೆಯಿಂದ ತಿಳಿಸಿಕೊಡುತ್ತಾರೆ. ಮತ್ತು ಮಾನವ ಬದುಕಿನಲ್ಲಿ ಅವುಗಳಿಗಿರುವ ಪಾತ್ರದ ದೃಷ್ಟಿಯಿಂದಲೂ ಇದು ಮೌಲ್ವಿಕ ವೆನಿಸುತ್ತದೆ.

ಕಾಡಿನಲ್ಲಿ ಕಾಣಸಿಗುವ ಪಕ್ಷಿಗಳನ್ನು ಕಾದಂಬರಿಯಲ್ಲಿ ಅಲ್ಲಲ್ಲಿ ತರುವ ಕುವೆಂಪು, ಕಾಜಾಣ, ಮರ ಕುಟಿಗ, ಮಂಗಟೆ, ಹದ್ದು, ಕಾಗೆ, ಪಿಕಳಾರ, ಕಾಡುಕೋಳಿ, ನವಿಲು, ಹೊರಸಲು ಇತ್ಯಾದಿ ಪಕ್ಷಿಗಳ ಆವಾಸ (habitat), ಆಹಾರ ಸೇವನೆಯ ವಿಧಾನ, ಸಂತಾನಾಭಿವೃದ್ಧಿ ಮಾನವರಿಗೆ ಅದರ ಉಪಯೋಗ, ನಿಸರ್ಗದಲ್ಲಿ ಅವುಗಳ ಪಾತ್ರ ಇತ್ಯಾದಿ ಅಂಶಗಳನ್ನು ಪರೋಕ್ಷವಾಗಿ ಪ್ರತಿಪಾದಿಸುತ್ತಾರೆ. ಹುತ್ತದಲ್ಲಿ ಗೂಡುಕಟ್ಟುವ ತುಡುವೆ ಜೇನು, ಹಾವು, ಚೇಳು, ಜಿಗಣಿ ಇತ್ಯಾದಿ ಸಣ್ಣ ಪುಟ್ಟ ಜೀವಿಗಳು ಈ ನಿಟ್ಟಿನಲ್ಲಿ ಹೊರತಾಗಿಲ್ಲ. ಅವರು ಪ್ರಕೃತಿಯನ್ನು ಸೂಕ್ಷ್ಮವಾಗಿ ಗಮನಿಸುವುದಕ್ಕೆ ಸಾಕ್ಷಿಎದ್ದು ಕಾಣುತ್ತದೆ.

ಮಲೆನಾಡಿನ ಭೌಗೋಳಿಕ ಲಕ್ಷಣ ಮತ್ತು ಪ್ರಾದೇಶಿಕತೆಗಳಿಗನುಗುಣವಾಗಿ ಇಲ್ಲಿ ಕೃಷಿ ಸಾಗಿತ್ತು. ಆಹಾರ ಸಂಪಾದನೆಯೇ ಮೂಲವಾಗಿದ್ದ ಕೃಷಿಯಲ್ಲಿ ಕೃಷಿಕರು ಸಂಪ್ರಾದಾಯಿಕ ಪದ್ಧತಿಗಳನ್ನು ಅನುಸರಿಸಿ ಬೆಳೆಗಳನ್ನು ಬೆಳೆಯುತ್ತಿದ್ದರು. ಅಡಿಕೆ, ಬಾಳೆ, ಎಲೆಬಳ್ಳಿಯ ತೋಟಗಳು ಭತ್ತದ ಗದ್ದೆಗಳು ಅಂದಿನ ಮಲೆನಾಡಿನಲ್ಲಿ ಆಹಾರದ ಮತ್ತು ವಾಣಿಜ್ಯ ಬೆಳೆಗಳಾಗಿದ್ದವು.

ಕೃಷಿಕರಿಗೆ ಅಂದು ಯಾವುದೇ ಆಧುನಿಕ ಯಂತ್ರದ ಪರಿಚಯವಿರದ ಕಾರಣ ಮಾನವ ಸಂಪನ್ಮೂಲ ಅಧಿಕವಾಗಿ ಬಳಕೆಯಲ್ಲಿತ್ತು. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಪುಟ 31 ರಲ್ಲಿ ``ಸುಬ್ಬಣ್ಣ ಹೆಗ್ಗಡೆಯವರು ಕೃಷಿಯ ಬಗ್ಗೆ ಮನೆಯ ಹೆಂಗಸರಿಗೆ ಸೋಮಾರಿತನದಿಂದಿರುವುದಕ್ಕೆ ಸ್ವಲ್ಪವೂ ಅವಕಾಶ ಕೊಡುತ್ತಿರಲಿಲ್ಲ. ಅಡುಗೆ ಕೆಲಸಗಳ ಜೊತೆಗೆ ಅವರ ಕೈಯಲ್ಲಿ ಮನೆಗೆ ಕಟ್ಟಿಗೆ ಹೊರಿಸುತ್ತಿದ್ದರು, ಕೊಟ್ಟಿಗೆಗೆ ಸೊಪ್ಪು ತರಗು ಹೊರಿಸುತ್ತಿದ್ದರು, ಗದ್ದೆಗೆ ಗೊಬ್ಬರ ಹಾಕಿಸುತ್ತಿದ್ದರು, ಸಸಿ ನೆಡಿಸುತ್ತಿದ್ದರು, ಕಳೆ ಕೀಳಿಸುತ್ತಿದ್ದರು.

ಕೃಷಿ ಕ್ರಮವಂತೂ ಗದ್ದೆ ತೋಟಗಳಲ್ಲಿ ಅಳುಗಳು ಎತ್ತು ನೇಗಿಲುಗಳನ್ನೇ ಆಶ್ರಯಿಸಿದ್ದ ಮಳೆ ಅವಲಂಬಿತ ಬೇಸಾಯ ಅಂದಿನ ಮಲೆನಾಡಿನಲ್ಲಿತ್ತು.ಮಲೆನಾಡಿನಲ್ಲಿ ಹಿಂದೆ ಕಾಡಿನ ಒಂದು ಭಾಗದಲ್ಲಿ ಮನೆ ನಿರ್ಮಿಸಿಕೊಂಡು ಮನೆಯ ಸುತ್ತ ಮುತ್ತಲೆ ಕೃಷಿಗಾಗಿ ಭೂಮಿಯನ್ನು ಸಿದ್ದಪಡಿಸಿಕೊಳ್ಳುತ್ತಿದ್ದುದ್ದು ವಾಡಿಕೆ. ಬಯಲು ಸೀಮೆಯಲ್ಲಿ ಕಂಡು ಬರುವಂತೆ ನಗರ ಪಟ್ಟಣಗಳು ತೀರಾ ವಿರಳವಾಗಿದ್ದವು. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಈ ಅಂಶಕ್ಕೆ ಪುಷ್ಟಿನೀಡುವಂತೆ ಉಲ್ಲೇಖ ಕಂಡು ಬರುತ್ತದೆ.

``ಗುತ್ತಿ ಕಾಡು ದಾರಿಯಲ್ಲಿ ಅಂತರ್ಮುಖಿಯಾಗಿ ನಡೆಯುತ್ತಿದ್ದಾಗ,`` ಬರುಬರುತ್ತಾ ಮೇಲೆ ಏರತೊಡಗಿತು. ಕಾಡು ದಟ್ಟವಾಯಿತು, ಹಕ್ಕಿ ಪಕ್ಷಿಗಳ ಹಾರಾಟವೂ ಉಲಿಹವೂ ವಿರಳವಾಗಿ ಕಡೆ ಕಡೆಗೆ ನಿಂತೇ ಹೋಯಿತು. ಆ ಅರಣ್ಯ ನಿಬಿ.ಡತೆಯಲ್ಲಿ ಬಿಸಿಲು ಅಡಗಿದಂತಾಗಿ ಮರಗತ್ತಲು ಹೆಚ್ಚಾಯಿತು. ಅವನು ಕಾಡು ಭಯಂಕರವಾಗಿದ್ದ ಆ ಹುಲಿಕಲ್ಲು ಗುಡ್ಡವನ್ನೇರಿ ಇಳಿದರೆ ಆ ಕಡೆಯ ಕಣಿವೆಯಲ್ಲಿ ಕೋಣೂರು ರಂಗಪ್ಪ ಗೌಡರ ಮನೆ ಗದ್ದೆ ತೋಟ ಸಿಗುತ್ತಿತ್ತು. ಆ ಹುಲಿಕಲ್ಲು ಗುಡ್ಡದ ಕಾಡು ಆ ಕಡೆಯಲ್ಲೆಲ್ಲಾ ಅತ್ಯಂತ ದಟ್ಟವಾದುದೆಂದೂ ಜೀವನದಿಗಳಿಗೆ ನೆಲೆಬೀಡೆಂದೂ ಹೆಸರುವಾಸಿಯಾಗಿತ್ತು. ಅದರ ಕಡಿವೂ ನಿಬಿಡತೆಯೂ ಎಷ್ಟರ ಮಟ್ಟಿನದಾಗಿತ್ತೆಂದರೆ ದೊಡ್ಡ ಬೇಟೆಗೆ ಹೋಗುವವರು. ಆ ಕಾಡಿಗೆ ಹೋಗಲು ಹಿಂಜರಿಯುತ್ತಿದ್ದರು. ಕಡಿದಾದ ದಾರಿ ಕಂದರಗಳಿಂದ ದುರ್ಗಮಯವಾಗಿದ್ದ ಅದನ್ನು ಸೋವಲು ಹಳುನುಗಲಿಕ್ಕೇ ಕನಿಷ್ಟಪಕ್ಷ ನೂರು ನೂರೈವತ್ತು ಜನರು ಬೇಕಾಗುತ್ತಿತ್ತು.

ಹುಲಿಕಲ್ಲು ಗುಡ್ಡವನ್ನೇರಿ ಇಳಿದರೆ ಆ ಕಡೆಯ ಕಣಿವೆಯಲ್ಲಿ ಕೋಣೂರು ರಂಗಪ್ಪ ಗೌಡರ ಮನೆ ಗದ್ದೆ ತೋಟ ಸಿಗುತ್ತಿತ್ತು. ಈ ವಾಕ್ಯ ಕಾಡಿನ ಅಂಚಿನಲ್ಲಿಯೇ ತೋಟಗಳು ಇರುತ್ತಿದ್ದವು ಎಂಬುದನ್ನು ತಿಳಿಸುತ್ತದೆ.

ಕಾಡಿನಲ್ಲಿ ದೊರೆಯುವ ಅನೇಕ ಸಸ್ಯಗಳನ್ನು ಪ್ರಾಣಿಗಳನ್ನು ಇತರೆ ಸಂಪನ್ಮೂಲಗಳನ್ನು ಮಲೆನಾಡಿನ ಜನರು ಆಹಾರವಾಗಿ ಬಳಸುತ್ತಿದ್ದರು ಎಂಬುದನ್ನು ಸಮರ್ಥಿಸುವ ಉಲ್ಲೇಖ ಪಟ 51 ರಲ್ಲಿ ಕಂಡು ಬರುತ್ತದೆ. ಅಂತಕ್ಕ ಶೆಟ್ಟಿಯ ಮನೆಯ ಅಡಿಗೆಗಾಗಿ ಒಮ್ಮೊಮ್ಮೆ ಗುತ್ತಿಯು ಅಣಬೆಯ ಕಾಲದಲ್ಲಿ ಕಾಡಿನಲ್ಲಿ ದೊರಕುತ್ತಿದ್ದ ಅಕ್ಕಿ ಬಿಳಿವಿ, ಹೆಗ್ಗಾಲಳಿಬಿ, ಚಳ್ಳಳಿಬಿ, ಕಾಸರ್ತಗಳಬಿ ಇವುಗಳನ್ನು ತಂದು ಕೊಡುತ್ತದ್ದನು.

ಒಮ್ಮೊಮ್ಮೆ ಇತರರ ಅಡಿಕೆ, ಬಾಳೆ, ತೋಟಗಳಲ್ಲಿ ಹಾದು ಬೇಲಿಯ ತಡಬೆ ದಾಟಿ ಬರುವ ಪ್ರಮೇಯಒದಗಿದಾದ ಬಾಳೆಗೊನೆಗಳನ್ನು ತಂದುಕೊಡುತ್ತಿದ್ದುದ್ದೂ ಉಂಟು. ಅಧಿಕ ಪ್ರೋಟೀನನ್ನು ಒಳಗೊಂಡ ಪೌಷ್ಟಿಕ ಆಹಾರ ಅಣಬೆ ಮಲೆನಾಡಿನ ತೇವಾಂಶದಲ್ಲಿ ಅನೇಕ ಅಣಬೆ

ಪ್ರಭೇದಗಳು ಕಂಡು ಬರುವುದನ್ನು ಮತ್ತು ಆಹಾರಕ್ಕಾಗಿ ಕಾಡಿನ ನೈಸರ್ಗಿಕ ಸಂಪನ್ಮೂಲಗಳನ್ನು ಮಲೆನಾಡಿನ ಜನಬಳಸಿಕೊಳ್ಳುತ್ತಿದ್ದ ರೀತಿಯೂ ಇದರಿಂದ ತಿಳಿಯುತ್ತದೆ.

ಕಾಡಿನಲ್ಲಿ ದೊರೆಯುವ ಅನೇಕ ಹಣ್ಣುಗಳಾದ ಹಲಸು, ಕಾಕಿಹಣ್ಣು, ಬೆಮ್ಮೊರಲ ಹಣ್ಣುಗಳ ಉಲ್ಲೇಖವು ಅಲ್ಲಲ್ಲಿ ಕಂಡು ಬರುತ್ತದೆ. ಮಲೆನಾಡಿನ ಜನರು ಬಿದಿರು ಮತ್ತು ಬಗನಿ ಗಿಡದ ತಿರುಳನ್ನು ಆಹಾರವಾಗಿ ಉಪಯೋಗಿಸುವ ಉದಾಹರಣೆಗಳು ಕಾದಂಬರಿಯಲ್ಲಿ ಕಂಡು ಬರುತ್ತವೆ.

ಸಹ್ಯಾದ್ರಿಯ ಪರ್ವತಗಳ ಸೌಂದರ್ಯ ಕುವೆಂಪುರವರ ಮೇಲೆ ಗಾಢವಾದ ಪರಿಣಾಮ ಬೀರಿದೆ. ಕೇವಲ ನಿಸರ್ಗದ ಚೆಲುವಿಗಷ್ಟೇ ಅಲ್ಲದೇ ಕುವೆಂಪುರವರ ತಾಯಿ ನೆಲದ ಅಭಿಮಾನ, ಪ್ರೀತಿ ಹಾಗೂ ಮಲೆನಾಡಿನ ಸಸ್ಯಶ್ರೀ ಅವರ ಮನಸ್ಸನ್ನು ಅಪಾರವಾಗಿ ಸೂರೆಗೊಂಡಿತ್ತು ಎಂಬುದಕ್ಕೆ ಸಾಕ್ಷಿ ಅವರ ಕಾದಂಬರಿ ಹಾಗೂ ಕವನಗಳಲ್ಲಿ ಮಲೆನಾಡಿನ ಬೆಟ್ಟಗುಡ್ಡ, ಅರಣ್ಯ, ನದಿಯ ವೈಭವ, ಸೂರ್ಯೋದಯ, ಸೂರ್ಯಾಸ್ತ, ಕಗ್ಗತ್ತಲು, ಮರಗಿಡಗಳು, ಮಲೆನಾಡಿನ ಪಕ್ಷಿಗಳು, ಪ್ರಾಣಿಗಳು, ಕೀಟಗಳು ಮಲೆನಾಡಿನ ಮೌನ ಮನವರಿಕೆ ಮಾಡುವ ಶಾಂತಿಯ ಸ್ವರೂಪವನ್ನು ಬಣ್ಣಿಸಿದ್ದಾರೆ.

ಮಲೆನಾಡಿನಲ್ಲಿ ಹುಟ್ಟಿ ಮೈದುಂಬಿ ಹರಿಯುವ ನದಿಗಳಾದ ತುಂಗೆ, ಭದ್ರೆ, ಶರಾವತಿ ಇತ್ಯಾದಿ ನದಿಗಳು ಅವುಗಳ ಜುಳು ಜುಳ ನಿನಾದ ಅದರೊಳಗಿನ ಬದುಕು ಜಲಚರಗಳಾದ ಮೀನು, ಕಪ್ಪೆ, ಏಡಿ ಇತ್ಯಾದಿಗಳು ಅವರ ಸಮಗ್ರ ಗದ್ಯ ಮತ್ತು ಕಾವ್ಯಗಳು ಪ್ರಕೃತಿಯಲ್ಲಿ ಮಿಂದು ಮೂಡಿವೆಯೋ ಎಂಬಂತೆ ತೋರುತ್ತದೆ.

``ಪ್ರಕೃತಿಯನ್ನು ದೈವಿಶಕ್ತಿಯ ಸ್ವರೂಪವಾಗಿ ನೋಡಿರುವ ಕವಿ ಕುವೆಂಪು ತಮ್ಮ ಕಾವ್ಯ, ಕಥೆ, ಕಾದಂಬರಿ, ವಿಚಾರಸಾಹಿತ್ಯ ಕೃತಿಗಳಲ್ಲಿ ಪ್ರಕೃತಿಯನ್ನು ಬಗೆಬಗೆಯಾಗಿ ವರ್ಣಿಸಿದ್ದಾರೆ. ಸಂಕೇತ, ರೂಪಕ ಪ್ರತಿಮೆಗಳಾಗಿ ಪ್ರಕೃತಿಯನ್ನು ಬಳಸಿಕೊಂಡಿದ್ದಾರೆ. ಪ್ರಕೃತಿ ವರ್ಣನೆಯ ಮೂಲಕ ತಾತ್ವಿಕ, ಆಧ್ಯಾತ್ಮಿಕ ಅಂಶಗಳನ್ನು ಅಭಿವ್ಯಕ್ತಿಸಿದ್ದಾರೆ. ಮಾನವ ಪ್ರಕೃತಿಗೂ ಪ್ರಾಕೃತಿಕವಾದ ಸ್ಥಿತಿಗಳಿಗೂ ಇರುವ ಸಂಬಂಧಗಳನ್ನು ವಿಶ್ಲೇಷಿಸಿದ್ದಾರೆ`` ಎನ್ನುತ್ತಾರೆ ಡಾ ! ಎಲ್.ಸಿ. ಸುಮಿತ್ರರವರು.

ಕೇವಲ ಪ್ರಕೃತಿ, ಮರ, ಗಿಡ, ಪ್ರಾಣಿ ಸಮೂಹವನ್ನಾಷ್ಟೇ ಅಲ್ಲದೆ ತಮ್ಮ ಜೀವನೋಪಾಯಕ್ಕಾಗಿ ಮಲೆನಾಡಿನ ಜನಸಮೂಹ ಅವಲಂಬಿಸಿದ್ದ ಕೃಷಿಯ ರೀತಿ ನೀತಿಗಳು ಕಾದಂಬರಿಯಲ್ಲಿವೆ. ಕಾಡಿನ ಒಂದು ತುದಿಯಲ್ಲಿ ನಿರ್ಮಾಣಗೊಳ್ಳುತ್ತಿದ್ದ ಕೃಷಿ ಭೂಮಿಗಳು ವಿಸ್ತಾರವಾಗಿದ್ದವು. ಹೊಲಗದ್ದೆ, ತೋಟಗಳು ಅಲ್ಲಿ ದುಡಿಯುವ ಕೃಷಿಕರು ಶ್ರಮಜೀವಿಗಳಾಗಿದ್ದರು. ಮಳೆಗಾಲದಲ್ಲಿ ಗೊರಬ್ಬಗಳನ್ನು ತಲೆಯ ಮೇಲೆ ಹೊದ್ದುಕೊಂಡು ಗದ್ದೆಗೆ ಇಳಿಯುತ್ತಿದ್ದರು. ಹಸಿರು ಬೆಟ್ಟ ಗುಡ್ಡಗಳ ಹಿನ್ನೆಲೆಯಲ್ಲಿ ಹಚ್ಚ ಹಸುರಿನ ಭತ್ತದ ಸಸಿಗಳು ಮಲೆನಾಡಿನ ಪ್ರಾಕೃತಿಕ

ಸೌಂದರ್ಯವನ್ನು ಇಮ್ಮಡಿಗೊಳಿಸಿವೆಯೇನೋ ಎಂಬಂತೆ ಇದ್ದ ಪ್ರಕೃತಿಯ ಮಡಿಲಿನಲ್ಲಿ ಮಲೆನಾಡ ಜನರ ನೆಮ್ಮದಿಯ ಬದುಕು ಸಾಗಿತ್ತು. ``ಎರಡು ತಿಂಗಳ ಹಿಂದೆ ಬೋಳು ಬೆತ್ತಲೆಯಾಗಿ ಒಣಗಿದ್ದ ಗದ್ದೆಯ ಕೋಗುಗಳು ಇಂದು ಭತ್ತದ ಸಸಿಗಳಿಂದಲೂ ಕಟ್ಟನಿಲ್ಲಿಸಿದ ನೀರಿನಿಂದಲೂ, ಕಳಕಳಿಸಿ ನಗುತ್ತಿದ್ದವು. ಸುತ್ತಲೂ ಬೆಟ್ಟ ಕಾಡುಗಳಿದ್ದು, ನಡುವೆ ಕಣಿವೆಯಲ್ಲಿ ಅಗಲವಾಗಿ ಹಬ್ಬಿ ಬೆಳೆದಿದ್ದ ಎಳೆ ಸಸಿಯ ಗದ್ದೆಯ ಕೋಗಿನ ಕೋಮಲವಾದ ಹಸುರು, ಕಣ್ಣಿಗೆ ನಲ್ಮೆಯನ್ನು, ಮನಸ್ಸಿಗೆ ಆಹ್ಲಾದವನ್ನೂ, ಆತ್ಮಕ್ಕೆ ಶಾಂತಿಯನ್ನು ಮೆತ್ತುವಂತಿತ್ತು``. ( ಪುಟ-391ಕಾನೂರು ಹೆಗ್ಗಡತಿ)

ನಮಗೆ ಬದುಕಲು ಮನೆ ಹೇಗೆ ಅಗತ್ಯವೋ ಹಾಗೆಯೇ ಇತರ ಪ್ರಾಣಿ, ಪಕ್ಷಿ, ಕೀಟ ವರ್ಗಕ್ಕೂ ಬದುಕಲು ತಮ್ಮದೆ ಆದ ಆವಾಸ ಅತ್ಯಗತ್ಯ. ಉದಾಹರಣೆಗೆ ಮೀನಿನ ಆವಾಸ ನೀರಾದರೆ, ಕೆಲವು ಜಾತಿಯ ಮೀನುಗಳ ಆವಾಸ ಮಾತ್ರ ತಿಳಿನೀರು ಇನ್ನು ಕೆಲವುಗಳದ್ದು ಉಪ್ಪು ನೀರು, ಪಕ್ಷಿಗಳ ಆವಾಸ (habitat) ಮರ, ಹೀಗೆ ಒಟ್ಟು ಒಂದು ಜೀವವಾಸದ (Ecosystem) ಅತ್ಯಂತ ಚಿಕ್ಕ ಭಾಗವೇ ಆವಾಸ (habitat) ಹಲವಾರು ಆವಾಸ (habitat) ಗಳು ಸೇರಿ ಒಂದು ಜೀವವಾಸವಾಗಿದೆ.

ಜೀವವಾಸದಲ್ಲಿ ಅಸಂಖ್ಯಾತ ಅಥವಾ ಹಲವಾರು ಆವಾಸಗಳಿರುತ್ತವೆ. ಸ್ಥಳೀಯ ಪ್ರಾಣಿ, ಪಕ್ಷಿ, ಕೀಟ ಇತ್ಯಾದಿಗಳಿಗೆ ಆಶ್ರಯವನ್ನಿವ ಆವಾಸ ನಾಶಹೊಂದಿದರೆ, ಅಲ್ಲಿ ಬದುಕುತ್ತಿದ್ದ ಪ್ರಾಣಿ, ಪಕ್ಷಿ, ಸಸ್ಯ ಪ್ರಪಂಚ ಸಹ ವಿನಾಶ ಹೊಂದುತ್ತದೆ.

ಹೀಗೆ ಕಾಡು ನಾಶವಾದರೆ ಅಲ್ಲಿನ ವನ್ಯ ಜೀವಿಗಳು ನಾಶಹೊಂದುತ್ತವೆ. ಕೆಲವು ಜೀವಿ ಪ್ರಭೇದಗಳು ಹಾಗೆ ಕೆಲವು ಒಂದೇ ಪ್ರದೇಶಕ್ಕೆ ಮಾತ್ರ ಹೊಂದಿಕೊಂಡು ಅಲ್ಲಿ ಮಾತ್ರ ಬದುಕುತ್ತವೆ. ಅವುಗಳನ್ನು ಸ್ಥಳೀಯ ಪ್ರಭೇದ ಅಥವಾ ``ಎಂಡೆಮಿಕ್ ಸ್ಪೀಷೀಸ್`` (Endemic Species) ಎಂದು ಕರೆಯಬಹುದು. ಆ ನಿರ್ದಿಷ್ಟ ಪ್ರದೇಶದಲ್ಲಿರುವ ಸ್ಥಳೀಯ ಪ್ರಭೇದಗಳ ಸಂಖ್ಯೆ ಆ ಪ್ರದೇಶದ ಜೀವ ವೈವಿಧ್ಯತೆಯನ್ನು ತಿಳಿಸುತ್ತದೆ. ಯಾವುದೇ ಕಾರಣದಿಂದಾಗಿ ಸ್ಥಳೀಯ ಪ್ರಭೇದಗಳಿಗೆ ಆಶ್ರಯ ನೀಡುವ ಈ ಆವಾಸಕ್ಕೆ ತೊಂದರೆಯುಂಟಾದರೆ ಅದರಲ್ಲಿ ತಮ್ಮ ಬದುಕು ಸಾಗಿಸುತ್ತಿದ್ದ ಪ್ರಾಣಿ, ಪಕ್ಷಿ ಸಂಕುಲ ಸಹ ಅಳಿಯುತ್ತದೆ. ಆದ್ದರಿಂದ ಜೀವಿಯೊಂದರ ಬದುಕಿನಲ್ಲಿ ಆವಾಸ ಬಹುಮುಖ್ಯ ಪಾತ್ರ ವಹಿಸುತ್ತದೆ.

ಕುವೆಂಪು ಸಾಹಿತ್ಯದಲ್ಲಿ ಕಂಡು ಬಂದಿರುವ ಪ್ರಾಣಿ ಪ್ರಪಂಚ ಮಲೆನಾಡಿನ ಪ್ರಕೃತಿ ನೈಜ ಚಿತ್ರಣ ಮೂಡಿಸುತ್ತದೆ. ಇಲ್ಲಿನ ದುರ್ಗಮ ಕಾಡುಗಳು ಭೀಕರತೆಯ ಪರಿಚಯವೂ ಇಲ್ಲಿದೆ. ಸಹ್ಯಾದ್ರಿಯ ಕಾಡು ತನ್ನಲ್ಲಿ ಅನೇಕ ಸಸ್ಯಹಾರಿ, ಮಾಂಸಹಾರಿ ಪ್ರಾಣಿಗಳನ್ನು ಘೋರ ಸರ್ಪ, ಹೆಬ್ಬಾವುಗಳನ್ನು ಹುಲಿ, ಕಾಡುಹಂದಿ, ಹೋರಿಮಿಗ ಇತ್ಯಾದಿಗಳನ್ನು ಹೊಂದಿರುವ ಬಗ್ಗೆ ದಾಖಲೆ ಇದೆ.

``ಗುತ್ತಿ ನೋಡುತ್ತಾನೆ. ನಾಯಿ ತುಸು ದೂರವೆ ಹಳುವಿನಲ್ಲಿ ಬಿದ್ದಿರುವ ಒಂದು ಮರದ ದಿಮ್ಮಿಯ ಕಡೆ ನೋಡಿ ಬೊಗಳುತ್ತದೆ. ಹಾಗಾದರೆ ಆ ದಿಮ್ಮಿಯ ಹತ್ತಿರ ಯಾವುದದರೂ ಕಾಳಿಂಗನ ಹಾವೋ, ಸರ್ಪನಹಾವೋ ಇರಬಹುದೆಂದು ಗುತ್ತಿ ನೆಲವನ್ನು ಪರೀಕ್ಷಿಸುತ್ತಾ ಮುಂದುವರಿಯುವಷ್ಟರಲ್ಲಿ ನಾಯಿ ಬೊಗಳಿ ಬೊಗಳಿ ಹಾರಿ ತೆಗೆದು ಆ ದಿಮ್ಮಿಯನ್ನು ಕಚ್ಚಿ ಬಿಟ್ಟಿತು! ಅಯ್ಯಯ್ಯೋ ! ನೋಡುತ್ತಾನೆ; ಆ ದಿಮ್ಮೆಯೇ ಜೀವಂತ ಹೆಬ್ಬಾವು ಚಲಿಸುತ್ತಿಲ್ಲ ಬಿದ್ದದೇ ! ಅದರ ತಲೆ ಎಲ್ಲಿದೆಯೋ ಬಾಲವೆತ್ತ ಕಡೆಯೋ ಇದು ಗೊತ್ತಾಗುತ್ತಿರಲಿಲ್ಲ. ಆ ಹಳುವಿನಲ್ಲಿ`` (ಪುಟ-23 ಮಲೆಗಳಲ್ಲಿ ಮದುಮಗಳು).

ಮಲೆನಾಡಿನ ನಿಬಿಡ ಕಾನನದ ಮಧ್ಯೆ ಹುಟ್ಟಿ, ಅಲ್ಲೇ ಬೆಳೆದು ಬದುಕು ನೆಡೆ ಸಿ ಕಡೆಗೆ ಮಾನವ ,ರ ಆಹಾರವಾಗುವ ಕಾಡುಮೃಗಗಳು ಹಲವು. ಈ ಪ್ರಾಣಿಗಳು ಮಾನವನ ಅವಶ್ಯಕತೆ ಪೂರೈಸುವ ವಸ್ತುಗಳಂತೆ ಸಹ ಹಲವೆಡೆ ಕಂಡು ಬರುತ್ತವೆ. ಕಾಡಿನಲ್ಲಿ ತನ್ನ ಸಮಯದ ಅಧಿಕ ಭಾಗವನ್ನು ಕಳೆಯುತ್ತಿದ್ದ ಗುತ್ತಿಗೆ ಅರಣ್ಯದ ಬಗ್ಗೆ ಅಲ್ಲಿನ ಪ್ರಾಣಿಗಳ ಬಗ್ಗೆ ಇತರರಿಗಿಂತ ಹೆಚ್ಚಿನ ಜ್ಞಾನವಿತ್ತು ಎಂಬ ಸಂಗತಿಯೂ `ಮಲೆಗಳಲ್ಲಿ ಮದುಮಗಳು''ವಿನಲ್ಲಿ ವ್ಯಕ್ತವಾಗುತ್ತದೆ. ಕಾಡಿನಲ್ಲಿ ಆತನ ಸಾಹಸಗಳಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುವ ಅಧಿಕ ಪ್ರಾಣಿಸಂಕುಲದ ಪರಿಚಯವಿದೆ.

ಗುತ್ತಿ ಕಾಡಿನಲ್ಲಿ ಲಕ್ಕುಂದದಿಂದ ಮೇಗರವಳ್ಳಿಯ ನಡುವೆ ಸಂಚರಿಸುತ್ತಾ ಬಳಿಯಲ್ಲೆಲ್ಲೂ ಹಂದಿಗಳ ಹಿಂಡು ಇರುವ ಬಗ್ಗೆ ಸಂಶಯಿಸುತ್ತಾನೆ. ``ಹೋದ ರಾತ್ರಿ ಹೊಯ್ದ ಮಳೆಯಿಂದ ತನ್ನಗಾಗಿದ್ದ ಕಾಡಿನ ತಂಪು ಗಾಳಿಯಲ್ಲಿ ಗುತ್ತಿ ಚಟುವಟಿಕೆಯಾಗಿ ಸಾಗಿದನು. ಹಾದಿಯಲ್ಲಿ ಒಂದು ಕಡೆ ಹಂದಿಯ ಹಿಂಡು ಉತ್ತಿದ್ದನ್ನು ಕಂಡಾಗಲೇ ಅವನಿಗೆ ಹುಲಿ ನೆನಪಾಗಿ ಕೂಗಿದನು.

ಕ್ರೂರ ವನ್ಯಜೀವಿಗಳಲ್ಲದೆ ಚಿಕ್ಕ ಪುಟ್ಟ ಪ್ರಾಣಿಗಳಾದ ಮೊಲ, ಚಿಟ್ಟಳಿಲು, ಬೆಳ್ಳಿಲಿಗಳನ್ನು ತಮ್ಮ ಕಾದಂಬರಿಯಲ್ಲಿ ಸಂದರ್ಭಕ್ಕನುಗುಣವಾಗಿ ಬಣ್ಣಿಸಿರುವ ಕುವೆಂಪು ಸಣ್ಣ ಅಷ್ಟಾಗಿ ಮಾನವನ ಉಪಯೋಗಕ್ಕೆ ಬಾರದ, ಉಡ, ಓತಿಕ್ಯಾತ ಇತ್ಯಾದಿಗಳ ಪ್ರಸ್ಥಾಪ ಕಂಡು ಬರುತ್ತದೆ.

ಗದ್ದೆಯ ಕೂಗಿನಲ್ಲಿ ಮುಂಗಾರು ಮಳೆಯಲ್ಲಿ ಹೇರಳವಾಗಿ ದೊರೆಯುತ್ತಿದ್ದ ಹತ್ತು ಮೀನುಗಳು, ಏಡಿ ಕಪ್ಪೆ, ಕಾರೇಡೆ, ಬೆಳ್ಳೀಡಿಗಳ ಬಗ್ಗೆಯೂ ಅಲ್ಲಲ್ಲಿ ಪ್ರಸ್ಥಾಪವಿದೆ. ಮಲೆಗಾಲದಲ್ಲಿ ಇಲ್ಲಿನ ಜನರಿಗೆ ಆಹಾರದ ಒಂದು ಭಾಗವಾಗಿ ಬಳಸಲ್ಪಡುತ್ತಿದ್ದ ಜಲಚರಗಳ ಬಗ್ಗೆ. ಅವುಗಳನ್ನು ಕೃಷಿಕರು ಗದ್ದೆಗಳಲ್ಲಿ ಕೂಣಿ ಹಾಕಿ ಹಿಡಿಯುತ್ತಿದ್ದ ರೀತಿಯನ್ನು ಕಂಡು ಬರುತ್ತದೆ.

ಮಳೆಗಾಲದಲ್ಲಿ ಹೊಸ ನೀರು ಬಂದಾಗ ನದಿಗಳಿಂದ ಹೊರಬೀಳುವ ಕೆಲವು ಮೀನುಗಳು ಸಂತಾನಾಭಿವೃದ್ಧಿಗಾಗಿ ಹೊರಗೆ ಬಂದು ಗದ್ದೆಗಳಿಗೆ ಅಧಿಕ ಸಂಖ್ಯೆಯಲ್ಲಿ ಬರುತ್ತಿದ್ದವು.

``ಕತ್ತಲೆಯಾದುದ್ದಾಗಲಿ ಮಳೆ ಜೋರಾಗಿ ಹೊಯ್ದುದಾಗಲಿ ನೆರೆ ಮನೆಯ ಪುಟ್ಟ ಮಗನನ್ನು ಕರೆದುಕೊಂಡು ಹತ್ತು ಮೀನು ಕಡಿಯುವುದಕ್ಕೆ ಹೋದುದಾಗಲಿ ಅವನ ಗಮನಕ್ಕೆ ಬಂದಿರಲಿಲ್ಲ``. (ಪುಟ -11 ಮಲೆಗಳಲ್ಲಿ ಮದುಮಗಳು)

ಮಳೆಗಾಲದಲ್ಲಿ ತುಂಬಿ ಹರಿವ ಹಳ್ಳಗಳ ಚಿತ್ರಣ ಮತ್ತು ಅದರಲ್ಲಿನ ಜಲಚರಗಳು ಅವುಗಳ ಮೇಲೆ ಅವಲಂಬಿತ ಮಾನವ ಬದುಕನ್ನು ಇಡಿಯಾಗಿ ಕಟ್ಟಿಕೊಡುವ ಪ್ರಕರಣಗಳು ಕುವೆಂಪು ಕಾದಂಬರಿಯಲ್ಲಿವೆ. ``ಸ್ವಲ್ಪ ಹೊತ್ತಿನಲ್ಲಯೆ ಹಳ್ಳದ ಆಚೆಯ ದೂರದಲ್ಲಿ ಲಕ್ಕುಂದದ ಗದ್ದೆ ಕೋಗಿನಲ್ಲಿ ಒಡ್ಡಿನಲ್ಲಿ ಪದೇ ಪದೇ ಬೀಗುತ್ತದ್ದ ದೊಂದಿಗಳು, ಲಾಟೀನುಗಳೂ ಕಾಣಿಸಿತು. ಈ ಮಳೇಲಿ ಮೀನು ಕಡಿಯಾಕೆ ಹೊರಟರಲ್ಲಪ್ಪ ಹತ್ತು ಮೀನು, ಮಳೆ ಸಂಪೂರ್ಣವಾಗಿ ನಿಂತಿತ್ತು. ತೊರೆಯ ಮೊರೆ ಮೊದಲಿನಷ್ಟು ಇರಲಿಲ್ಲ. ಮಳೆ ತೊರೆಗಳ ಜಲಘೋಷದಲ್ಲಿ ಹಿಂದೆ ಕೇಳಿಸದಿದ್ದ ಕಪ್ಪೆಗಳ ವಟಗುಟ್ಟುವಿಕೆ ಚಿತ್ರವಿಚಿತ್ರವಾಗಿ ಕೃತವಿಕೃತವಾಗಿ ಕೇಳಿಸುತ್ತಿತ್ತು. ಗಾಳಿ ಬೀಸಿದಂತೆಲ್ಲಾ ಮರದ ಹನಿ ತಟತಟನೆ ಉದುರುತ್ತಿತ್ತು``. (ಪುಟ-4 ಮಲೆಗಳಲ್ಲಿ ಮದುಮಗಳು).

ಕೀಟ ಜಗತ್ತನ್ನು ವಿಸ್ತಾರವಾಗಿ ಕಾದಂಬರಿಯ ಅಲ್ಲಲ್ಲಿ ಬಣ್ಣಿಸುವ ಕುವೆಂಪು ಸೆಗ ಣಿಹುಳು, ಹುತ್ತದಲ್ಲಿ ಗೂಡು ಕಟ್ಟುವ ತುಡುವೆ ಜೇನು, ಸೆಗಣಿಹುಳು ನುಸಿಗಳಿಗೂ ತಮ್ಮ ಕಾದಂಬರಿಯಲ್ಲಿ ಪ್ರಾಮುಖ್ಯತೆ ನೀಡಿದ್ದಾರೆ. ಇದರಿಂದ ಪರಿಸರದ ಸಮತೋಲನ ಸ್ಥಿತಿ ಕಾಯ್ದು ಕೊಳ್ಳುವಲ್ಲಿ ಅವುಗಳ ಪಾತ್ರದ ಸೂಕ್ಷ್ಮ ಅರಿವೂ ಇಲ್ಲಿ ಕಂಡುಬರುತ್ತದೆ. ಅನೇಕ ಕೀಟಗಳು ಮಲೆನಾಡಿನಲ್ಲಿ ಕಂಡುಬರುತ್ತವೆ. ರೋಗರುಜಿನಗಳನ್ನು ಹರಡುವ ಕೀಟಗಳ ಬಗ್ಗೆಯೂ ಪ್ರಸ್ತಾಪವಿದೆ."ಹಲಸಿನ ತರಗಿನ ನಡುವೆ ಬಿದ್ದಿದ್ದ ಒಂದು ಸೆಗಣಿ ಮುದ್ದೆಯಿಂದ ಒಂದು ಓಡುಹುಳು ಸಣ್ಣದೊಂದು ಉಂಡೆಯನ್ನು ರಚಿಸಿ ಅದನ್ನು ಹಿಂದುಮುಂದಾಗಿ ತನ್ನ ಹಿಂಗಾಲುಗಳಿಂದ ನೂಕಿಕೊಂಡು ಹೋಗುತ್ತಿತ್ತು". (ಪುಟ-50 ಮಲೆಗಳಲ್ಲಿ ಮದುಮಗಳು).

**ಕುವೆಂಪು ಸಾಹಿತ್ಯದಲ್ಲಿ ಹಕ್ಕಿ ಪಕ್ಷಿಗಳೂ ಸಹ ತಮ್ಮ ಪ್ರಾಮುಖ್ಯತೆಯನ್ನು ಮೆರೆದಿವೆ.**

- ``ಎರಡನೆಯ ಸಲ ಕೋಳಿ ಕೂಗುವ ಹೊತ್ತಿಗೆ ಗುತ್ತಿಗೆ ಎಚ್ಚರವಾಯಿತು. ಸ್ವಲ್ಪ ಚಳಿಯೂ ಆಯಿತು. ಕಂಬಳಿಯನ್ನು ಮತ್ತಷ್ಟು ಬಲವಾಗಿ ಮೈಗೆ ಸುತ್ತಿ ಹೊದೆದು, ಮುದುರಿ, ಕಣ್ಣು ಬಿಟ್ಟು ಕೊಂಡೇ ಮಲಗಿದನು. ತುಸು ಹೊತ್ತಿನಲ್ಲಿ ಮನೆಯ ಮುಂದೆ ಬೇಲಿಯ ಸಾಲಿನಲ್ಲಿ ಹಂಡಹಕ್ಕಿ ಸಿಳ್ಳು ಹಾಕತೊಡಗಿತು`` (ಪುಟ 21 ಮದುಗಳಲ್ಲಿ ಮದುಮಗಳು).
- ತೋಟದ ಬೇಲಿಯಲ್ಲಿ ಅಥವಾ ಅಮಟೆಯ ಮರದಲ್ಲಿಯೋ ಹಂಡ ಹಕ್ಕಿಗಳೆರಡು ಸಿಳ್ಳು ಪಡಿಸಿಳ್ಳುಗಳಿಂದ ಪ್ರಣಯ ಸಂಭಾಷಣೆಗೆ ಮೊದಲು ಮಾಡಿದವು. ಅದಾದ ಸ್ವಲ್ಪ ಹೊತ್ತಿನಲ್ಲಿಯೆ ಎಲೆಯುದುರಿ ಬರಲಾಗಿ ಕೆಂಪು ಹೂ ಮಾತ್ರ ತುಂಬಿ ಹೋಗಿದ್ದ

- ಹಾಲಿವಾಣದ ಮರದಲ್ಲಿ ಎಂದು ತೋರುತ್ತದೆ. ಕಾಜಾಣವೊಂದು ಆಲಾಪನೆಗೆ ತೊಡಗಿತು. (ಪುಟ-35 ಮಲೆಗಳಲ್ಲಿ ಮದುಮಗಳು).
- ಪಿಕಳಾರಗಳ ಸಿಳ್ಳು ಹೊರಸೂಸುವ ಹಕ್ಕಿಗಳ ಗಬಳಿಕೆಗೆಳಾಗಲಿ ಮರುಟಿಕನ ಕೊಟಾ ಕೊಟಾ ಸದ್ದಾಗಲಿ ಕಡೆಗೆ ಕಾಡುಕೋಳಿ ಹುಂಜನ ನಿಗಟು ನೀಳ್ದು ಕೇಕೆಗಳಾಗಲಿ ಅವನ ಕಿವಿಗೆ ಬೀಳುತ್ತಿದ್ದರೂ ಅವನಿಗೆ ಕೇಳಿಸುತ್ತಿರಲಿಲ್ಲ. ಕಣ್ಣಿಗೆ ಬಿದ್ದರೂ ಕಾಣಿಸುತ್ತಿರಲಿಲ್ಲ`` (ಪುಟ 56 ಮಲೆಗಳಲ್ಲಿ ಮದುಮಗಳು).
- ಮರದ ಮೇಲೆ ಕೋಗಿಲೆಯೊಂದು ಕೂಗಿತ್ತು `` ಆ ಕೂಗು ಹೂವಯ್ಯನಿಗೆ ನನ್ನಂತಾಗು, ನನ್ನಂತಾಗು`` ಎನ್ನುವಂತಿತ್ತು (ಪುಟ-6 ಕಾನೂರು ಹೆಗ್ಗಡತಿ).

ಈ ಪುಟಗಳಲ್ಲಿ ಉಲ್ಲೇಖಿತವಾಗಿರುವಂತೆ ಮಲೆನಾಡಿನ ಕಾಡು ಅಲ್ಲಿನ ಪ್ರಾಕೃತಿಕ ಲಕ್ಷಣಗಳ ಕುರಿತಾದ ಮಾಹಿತಿ ದೊರಕುತ್ತದೆ. ಅಲ್ಲಿನ ಪಕ್ಷಿಸಮೂಹದ ಬಗ್ಗೆ ಉಲ್ಲೇಖವಿದೆ.

ಮಲೆನಾಡಿನ ಪ್ರಾಕೃತಿಕ ಸೌಂದರ್ಯಕ್ಕೆ ಮೆರಗು ನೀಡುವ ಇಲ್ಲಿನ ಸುಂದರ, ಚಿಕ್ಕ ಪುಟ್ಟ ಹಕ್ಕಿ ಪಕ್ಷಿಗಳ ಪರಿಚಯ ನೀಡುವ ಕುವೆಂಪು. ಆ ಹಕ್ಕಿ ಪಕ್ಷಿಗಳ ಇಂಚರದ ಸದ್ದುಗಳಿಂದಾ ಹಿಡಿದು ಅವು ಸಾಮಾನ್ಯವಾಗಿ ಕಂಡು ಬರುವ ಅಥವಾ ಗೂಡು ಕಟ್ಟುವ ಮರಗಳ ಮಾಹಿತಿಯೂ ನೀಡುತ್ತಾರೆ. ನೂರಾರು ವರ್ಷಗಳಿಂದ ಮಾನವನ ಸಾಕು ಪಕ್ಷಿಯಾಗಿರುವ ಕೋಳಿಗಳು ಮುಂಜಾನೆ ಕೂಗುವುದರಿಂದಾ ಹಿಡಿದು, ತೋಟದ ಬೇಲಿ ಸಾಲುಗಳಲ್ಲಿ ಸಿಳ್ಳುಗಳನ್ನು ಹಾಕುವ ಹಂಡ ಹಕ್ಕಿಗಳ ಪ್ರಣ ಸಂಭಾಷಣೆಯ ಬಗ್ಗೆಯೂ ಓದುಗರನ್ನು ಸೆಳೆಯುವ ಕುವೆಂಪು ಹೊರಸಲು ಹಕ್ಕಿ ಮಾಡುವ ಗುಬ್ಬಳಕೆಯ ಸದ್ದನ್ನೂ ಸಹ ಕಾದಂಬರಿಯಲ್ಲಿ ಬಳಸಿ ಕೊಂಡಿದ್ದಾರೆ.

ಕಾಡಿನಲ್ಲಿ ಕೆಲವು ಮರಗಳಲ್ಲಿ ಕುಳಿತು ಕುಟುಕುವ ಮರಕುಟಿಗಗಳು ಹೊರಡಿಸುವ ಕೊಟ ಕೊಟ ಸದ್ದು ಕಾಡಿನಲ್ಲಿ ಪ್ರತಿಧ್ವನಿಸುವ ಬಗೆಯನ್ನು ಇಲ್ಲಿ ಕವಿ ಕೇಳಿದಂತೆಯೇ ವಿವರಿಸುತ್ತಾರೆ. ಹಾಲಿವಾಣದ ಮರಗಳಲ್ಲಿ ಸಾಮಾನ್ಯವಾಗಿ ಕಂಡುಬರು ಕಾಜಾಣದ ಆಲಾಪನೆಯ ಪ್ರಸ್ಥಾಪ ಕೂಡ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಮನೆ, ತೋಟಗಳ ಬಳಿಯಲ್ಲಿ ಚಿಕ್ಕ ಪುಟ್ಟ ಮರ ಗಿಡಗಳಲ್ಲಿ ಗೂಡು ಕಟ್ಟಿ ಮರಿ ಮಾಡುವ ಪಿಕಳಾರಗಳ ಸದ್ದು ಸಿಳ್ಳು ಹಾಕಿದಂತೆ ಭಾಸವಾಗುವುದನ್ನು ಅವರು ಇಲ್ಲಿ ನೀಡಿದ್ದಾರೆ. ಗುಂಪಾಗಿ ಹಾರುತ್ತಾ ತೋರಣದಂತೆ ಕಾಣಿಸಿಕೊಳ್ಳುವ ಗಿಳಿಗಳ ಹಿಂಡು ಅವುಗಳ ಇಂಚರ ಮಲೆನಾಡಿನ ಸೌಂದರ್ಯವನ್ನು ಮತ್ತಷ್ಟು ಹೆಚ್ಚಾಗಿಸಿವೆ.

ದುರ್ಗಮ ಅರಣ್ಯದ ನಿರ್ಜನ ತಾಣದಲ್ಲಿ ಕಾಡಿನ ರಮ್ಯತೆಯನ್ನು ಹೆಚ್ಚಿಸುವಂತಿರುವ ಈ ಪಕ್ಷಿಸಂಕುಲ ನಿಸರ್ಗದ ಸುಂದರ ಸೃಷ್ಟಿಯಲ್ಲೊಂದು.ತನ್ನ ಇಂಪಾದ ಕಂಠ ಹಾಗು ಗಾನಕ್ಕೆ

ಹೆಸರಾದ ಕೋಗಿಲೆಗಳ ಬಗ್ಗೆ ಕುವೆಂಪು ಕಾದಂಬರಿಯಲ್ಲಿ ಬಹಳೆಡೆ ವರ್ಣಿಸಿದ್ದಾರೆ. ಮಾವಿನ ಮರದ ಮೇಲೆ ಚಿಗುರು ತಿನ್ನುತ್ತಾ ಕೂಹೂ-ಕೂಹೂ ಎಂದು ಹಾಡುವ ಕೋಗಿಲೆಯ ಕಂಠ ಎಂತಹವರನ್ನು ಆಹ್ಲಾದಗೊಳಿಸುತ್ತದೆ.

ಬಾಣಗಳು ಚಲಿಸುವಂತೆ ವೇಗವಾಗಿ ಹಾರುವ ಕಾಮಳ್ಳಿಯ ಹಿಂಡುಗಳ ಪ್ರಸ್ತಾಪವೂ ಕಾದಂಬರಿಯಲ್ಲಿ ಕಂಡು ಬಂದಿದೆ. ಹೆಚ್ಚು ಚಿತ್ತಾಕರ್ಷಕ ಬಣ್ಣಗಳನ್ನು ಹೊಂದಿದ ಚಿಕ್ಕ ಪಕ್ಷಿ ಮಿಂಚುಳ್ಳಿಯ ಬಗೆಯೂ ಕುವೆಂಪು ಬಣ್ಣಿಸಿದ್ದಾರೆ. ನವಿಲುಗಳ ಬಗ್ಗೆಯೂ ಉಲ್ಲೇಖಿಸಿರುವ ಕುವೆಂಪು ಮಿಯಾ, ಮಿಯಾ, ಮಿ ಎಂದು ಈ ಮಿಂಚುಳ್ಳಿಗಳು ಕೂಗುವುದನ್ನು ಅವರು ಗಮನಿಸಿರುವುದು ತಿಳಿದು ಬರುತ್ತದೆ. ಮಿಂಗುಳಿಗನ ಹಕ್ಕಿ ಹೀಗೆ ಮಲೆನಾಡಿನಲ್ಲಿ ಕಾಣಸಿಗುವ ಹಕ್ಕಿ ಪಕ್ಷಿಗಳನ್ನು ಪರಿಚಯಿಸುವ ಕುವೆಂಪು ಪರೋಕ್ಷವಾಗಿ ಇಲ್ಲಿನ ಈ ಸುಂದರ ಪ್ರಾಕೃತಿಕ ಸೌಂದರ್ಯ ವರ್ಣನೆ ಮಾಡುವ ರೀತಿ ಮಾತ್ರ ಅನುಪ,ವಾಗಿದೆ. ಅಷ್ಟೇಅಲ್ಲದೆ ಮನೆಯ ಆಸುಪಾಸಿನಲ್ಲಿ ಚಿಕ್ಕ ಗಿಡಗಳಲ್ಲಿ ಗೂಡುಕಟ್ಟಿ ಸಂಸಾರ ನೆಡೆಸುವ ಪಿಕಾಳಾರಪ ಹಕ್ಕಿಗಳ ಸಂತಾನಭಿವೃದ್ದಿಯ ಸ್ಥೂಲ ಚಿತ್ರಣ ಸಹ ಕಾದಂಬರಿಯಲ್ಲಿದೆ.

`` ಆ ಗೂಡಿನಲ್ಲಿ ಕೆಂಪು, ನೀಲಿ ಬಣ್ಣವಾಗಿ ಚಿಕ್ಕ ಚಿಕ್ಕಿಯಾಗಿದ್ದ ಮೂರು ಪುಟ್ಟ ಮೊಟ್ಟೆಗಳಿದ್ದವು. ಮೊಟ್ಟೆಗಳನ್ನು ಯಾರು ತೆಗೆಯ ಕೂಡದೆಂದು ಮರಿಗಳಾದ ಮೇಲೆ ತಾಯಿ ಮತ್ತು ಮರಿಗಳನ್ನು ಒಟ್ಟಿಗೆ ಹಿಡಿದು ಸಾಕಬೇಕೆಂದು ವಾಸು ಕಟ್ಟಪ್ಪಣೆ ಮಾಡಿದ್ದನು. ಅವನು ದಿನಕ್ಕೆ ಕಡೆಯಪಕ್ಷ ಎರಡು ಸಾರಿಯಾದರೂ ಹೋಗಿ ಮೊಟ್ಟೆಗಳನ್ನು ನೋಡಿಕೊಂಡು ಬರುತ್ತಿದ್ದನು. ಅವನು ಹೋದಾಗ ಪ್ರತಿ ಸಲವೂ ಕಾವು ಕೂತ ಹಕ್ಕಿ ಹಾರಿಹೋಗುತ್ತಿತ್ತು. ಒಂದು ದಿನ ಹೋಗಿ ನೋಡುತ್ತಾನೆ ಮೊಟ್ಟೆಗಳೊಡೆದು ಮರಿಯಾಗಿದ್ದವು. ಮರಿಗಳು ನೋಡುವುದಕ್ಕೆ ಹೇಸಿಗೆಯಾಗಿದ್ದವು. ತಿಪ್ಪಳಿಲ್ಲದ ಮೈ, ಬೋಡುಮಂಡೆ, ದೇಹದ ಗಾತ್ರಕ್ಕೆ ಅತೀ ಎಂದು ಕಾಣುವ ಕೊಕ್ಕು, ಎಲ್ಲವೂ ಜಿಗುಪ್ಸೆ ಹುಟ್ಟಿಸುವಂತಿತ್ತು. ವಾಸು ನೋಡಿದಾಗಲೇ ಅವು ತಮ್ಮ ಕೆಂಪು ವೊರಯ ಬಾಯಿಗಳನ್ನು ಜಗತ್ತನ್ನೇ ನುಂಗುತ್ತೇವೆಂಬಂತೆ ಅಗಲವಾಗಿ ತೆರೆದು ನೊಗರೆಯುತ್ತಿದ್ದುದರಿಂದ ಅವನು ಪಕ್ಕದಲ್ಲಿಯೇ ಯಥೇಚ್ಚವಾಗಿ ಬೆಳೆದಿರುತ್ತಿದ್ದ ಲಾಂಟಾನದ `` ಹಣ್ಣುಗಳನ್ನು ಕೊಯ್ದು ಬಾಯಿ ಮುಚ್ಚುವತನಕ ಸುರಿಯುತ್ತಿದ್ದನು``. (ಪುಟ 63 ಕಾನೂರು ಹೆಗ್ಗಡತಿ).

ಬೆಳಕು ಮೂಡುತ್ತಿದ್ದ ಹಾಗೇಯೆ ಕಾಡಿನ ಮರಗಳ ರೆಂಬೆಯಿಂದ ಕೊಕ್ಕೊಕ್ಕೋ ಎಂದು ಕೂಗುವ ಕಾಡುಕೋಳಿ ತರಗೆಲೆಗಳಲ್ಲಿಯಲ್ಲಿನ ಹುಳು ಹುಪ್ಪಟೆಗಳನ್ನು ಕದರಿ ತಿನ್ನುವ ಪರಿಯೂ ಇಲ್ಲಿ ಕಂಡು ಬರುತ್ತದೆ. ಒಂದು ಜೀವಿಯ ಬಗ್ಗೆ ಇಷ್ಟೇಲ್ಲಾ ಮಾಹಿತಿ ನೀಡಲು ಸಾಧ್ಯವಾಗುವುದು ಅದರ ಜೀವನ ವಿಧಾನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಅಥವಾ ಅಭ್ಯಾಸ ಮಾಡಿದ್ದರೆ ಮಾತ್ರ ಸಾಧ್ಯವಾಗುತ್ತದೆ. ಕುವಂಪು ಹುಟ್ಟಿ ಬೆಳೆದಂತಹ ಈ ಪರಿಸರದಲ್ಲಿ ಹೇರಳವಾಗಿ ಕಾಣಸುತ್ತಿದ್ದ ಹಕ್ಕಿ ಪಕ್ಷಿಗಳ ಬಗ್ಗೆ ಕಾದಂಬರಿಯಲ್ಲಿ ಅಷ್ಟೇ ಅಲ್ಲದೆ ಕವಿತೆ ಕವನಗಳಲ್ಲೂ ವಿಪುಲವಾದ ವರ್ಣನೆ ಕಂಡು ಬರುತ್ತದೆ.

ಪಕ್ಷಿಗಳ ಬೇಟೆಯಾಡುವ ಅಥವಾ ಹಿಡಿಯುವ ಬಗೆಯೂ ಸಹ ಕಾದಂಬರಿಯಲ್ಲಿದೆ. ಚಿಕ್ಕ ಮಕ್ಕಳು ತಮ್ಮ ವಯೋಸಹಜವಾದ ಕುತೂಹಲವನ್ನು ಹಕ್ಕಿ ಪಕ್ಷಿಗಳನ್ನು ನೋಡಿ ವ್ಯಕ್ತಪಡಿಸುವ ಬಗೆಯನ್ನು ಕುವೆಂಪು ಅವರು ಮರಿಗಳನ್ನು ಹಿಡಿಯುವುದನ್ನು ಪಕ್ಷಿಗಳ ಮೊಟ್ಟೆಗಳನ್ನು ಕದಿಯುವುದನ್ನು ಸಹ ಉಲ್ಲೇಖಿಸಿದ್ದಾರೆ. ಹೀಗೆ ಮಾನವನ ಜಗತ್ತಿನೊಂದಿಗೆ ಬೆರೆತಿದ್ದ ಪಕ್ಷಿ ಸಂಕುಲದ ಇಡೀ ಚಿತ್ರಣವೇ ಕಾದಂಬರಿಯಲ್ಲಿದೆ.

## 4.ಕವಿ ಮತ್ತು ವಿಜ್ಞಾನಿಯ ದೃಷ್ಟಿಯಲ್ಲಿನ ಸೌಮ್ಯ ಮತ್ತು ವೈರುಧ್ಯ

ಕುವೆಂಪು ಮತ್ತು ಸಸ್ಯ ವಿಜ್ಞಾನಿ ಬಿ.ಜಿ.ಎಲ್. ಸ್ವಾಮಿ ಇಬ್ಬರೂ ಸ್ವಾತಂತ್ರ್ಯ ಪೂರ್ವದ ಪಶ್ಚಿಮ ಘಟ್ಟಗಳ ಕಾಡಿನ ಚಿತ್ರಣ ಮಾಡಿದ್ದಾರೆ. ಕುವೆಂಪು ಕವಿಯಾಗಿ, ಮತ್ತು ಈ ಕಾಡಿನ ಹಿನ್ನೆಲೆಯಿಂದಲೇ ಬಂದವರಾಗಿ ಈ ಕಾಡಿನ ಪರಿಸರವನ್ನು ಜೀವಕೇಂದ್ರಿತವಾಗಿ ಸೃಷ್ಟಿಸಿದ್ದಾರೆ. ಮಲೆನಾಡಿನ ದಟ್ಟ ಅರಣ್ಯ, ಗುಡ್ಡ, ಬೆಟ್ಟ, ಮಳೆ, ನದಿನೀರು, ಸಸ್ಯ, ಪ್ರಾಣಿ, ಪಕ್ಷಿ ಇದೆಲ್ಲದರ ನಡುವೆ ಮಾನವನ ಸಂಬಂಧವನ್ನೊಳಗೊಂಡಂತೆ, ಮಲೆನಾಡಿನ ಜನರ ಸಾಂಪ್ರದಾಯಿಕ ಜೀವನ ಶೈಲಿಯ ಪರಿಚಯ ನೀಡುವ ಅವರ ಕಾದಂಬರಿಗಳು ಕುವೆಂಪು ಪರಿಸರಕ್ಕೆ ನೀಡಿರುವ ಮಹತ್ವವನ್ನು ಎತ್ತಿ ಹಿಡಿಯುತ್ತವೆ.

ಕುವೆಂಪು ಕಾದಂಬರಿ ಹಾಗು ಕವನಗಳನ್ನು ತಮ್ಮ ಹುಟ್ಟೂರಾದ ಮಲೆನಾಡಿನ ಬಗ್ಗೆ ಅತೀವ ಅಭಿಮಾನ, ಪ್ರೀತಿ ವ್ಯಕ್ತ ಪಡಿಸಿದ್ದಾರೆ. ಸಸ್ಯ ಶ್ಯಾಮಲೆ ಅವರ ಮನಸ್ಸನ್ನು ಬಹಳಷ್ಟು ಮಟ್ಟಿಗೆ ಸೂರೆಗೊಂಡಿತ್ತು ಎಂಬುದಕ್ಕೆ ಸಾಕ್ಷಿ ಅವರ ಹೋಗುವೆನು ನಾನು ಕವನ, ಮಲೆನಾಡಿನಲ್ಲಿ, ತುಂಬಿ ಹರಿಯುವ ನದಿಗಳಾದ ತುಂಗೆ, ಭದ್ರೆ, ಶರಾವತಿಗಳ ಭೋರ್ಗರೆತದ ಬಗ್ಗೆ ಮನತುಂಬಿ ಬಣ್ಣಿಸುವ ಕವಿ ಕುವೆಂಪು. ಮಲೆನಾಡಿನ ದಟ್ಟ ಅರಣ್ಯದ ಪರಿಸರದ ಬದುಕನ್ನು ಬಹುವಾಗಿ ಪ್ರೀತಿಸಿದವರು ಪ್ರಕೃತಿ ಕುವೆಂಪುರವರ ವ್ಯಕ್ತಿತ್ವ ನಿರ್ಮಾಣದಲ್ಲಿ ಬಹು ಮುಖ್ಯ ಪಾತ್ರ ವಹಿಸಿತ್ತು ಎಂದರೆ ತಪ್ಪಾಗಲಾರದು.

ಜಗತ್ತಿನ ಶ್ರೇಷ್ಠ ಸಸ್ಯ ವಿಜ್ಞಾನಿಗಳಲೊಬ್ಬರಾದ ಬಿ.ಜಿ.ಎಲ್.ಸ್ವಾಮಿಯುವರು ಆಗುಂಬೆಯ ಮಳೆ ಕಾಡುಗಳನ್ನು ``ಪ್ರಕೃತಿಯ ನರ್ತನರಂಗಂ`` ಎಂದು ಬಣ್ಣಿಸಿ ಅಧ್ಯಯನ ನಡೆಸಿದ್ದಾರೆ. ಸಮುದ್ರದ ಮಟ್ಟದಿಂದ ಕೇವಲ 3000 ಅಡಿ ಎತ್ತರವಿರುವ ಆಗುಂಬೆಯು ಮೈ ಪ್ರಸ್ಥಭೂಮಿಯಾಗಿದ್ದು, ಅಲ್ಲಿ ಸಸ್ಯ ವೈಶಿಷ್ಟ್ಯವನ್ನು ``ಬನಸಿರಿ`` ಎಂದು ಕರೆದಿದ್ದಾರೆ. ಅವರೇ ಹೇಳುವಂತೆ ಈ ಕಾಡುಗಳಲ್ಲಿನ ಸಸ್ಯ ವೈಶಿಷ್ಟ್ಯವನ್ನು ಬಾಹುಳ್ಯವನ್ನು ಒಬ್ಬ ಅಧ್ಯಾಪಕನ ದೃಷ್ಟಿಯಿಂದ ಅವರು ನೋಡಿದರು.

``ಕಾಲಾನುಕಾಲದಿಂದ ನಮ್ಮ ಬದುಕಿನೊಂದಿಗೆ ಒಂದಲ್ಲ ಒಂದು ರೀತಿಯಲ್ಲಿ ಒಡನಾಡಿಗಳಾಗಿ ಬೆಳೆದು ಬಂದಿರುವ ಕೆಲವು ಗಿಡಮರಗಳ ಪರಿಚಯ ಮಾಡಿ ಕೊಡುವುದು ಈ ಬರವಣಿಗೆಯ ಪ್ರಯತ್ನ`` ಎಂದು ``ಹಸುರು ಹೊನ್ನು`` ವಿನ ಮುನ್ನುಡಿಯಲ್ಲಿ ಹೇಳಿರುವ ಬಿ.ಜಿ.ಎಲ್.ಸ್ವಾಮಿಯವರು ಈ ಪುಸ್ತಕದಲ್ಲಿ ನೂರಾರು ಸಸ್ಯಗಳ ಪರಿಚಯವನ್ನು ಅದರ ಬೆಳೆಯುವ ಪ್ರದೇಶದಿಂದಾ ಹಿಡಿದು, ಎಲೆಗಳ ರಚನೆ, ಹೂವು ಕಾಯಿ, ಹಣ್ಣುಗಳು, ಆ ಸಸ್ಯದ ಉಪಯೋಗ, ಅದರ ಗುಣವೈಶಿಷ್ಟ್ಯತೆ ಎಲ್ಲವನ್ನು ವೈಜ್ಞಾನಿಕ ನೆಲೆಗಟ್ಟಿನ ಮೇಲೆ ಎಂತಹವರಿಗೂ ಅರ್ಥವಾಗುವಂತೆ ಸರಳವಾಗಿ ವಿವರಿಸಿದ್ದಾರೆ.

ಮಲೆನಾಡಿನ ಮಳೆಯನ್ನು ಬಿ.ಜಿ.ಎಲ್.ಸ್ವಾಮಿಯವರು ಪ್ರಾಧ್ಯಾಪಕರಾಗಿದ್ದ ಸಂದರ್ಭದಲ್ಲಿ ವಿದ್ಯಾರ್ಥಿಗಳೊಂದಿಗೆ ಸಸ್ಯ ಸಂಗ್ರಹಣೆಗಾಗಿ ಆಗುಂಬೆ ಕಾಡುಗಳಿಗೆ ಪ್ರವಾಸ ಬಂದಿದ್ದಾಗ ನಿಶಾನಿಗುಡ್ಡದ ತೋಪಿನ ಒಳಗಡೆ, ಸಂಗ್ರಹಣೆಯಲ್ಲಿ ತೊಡಗಿದ್ದಾಗ ಇದ್ದಕ್ಕಿದ್ದಂತೆ ಕತ್ತಲು ಕವಿದು ರಭಸವಾಗಿ ಮಳೆ ಸುರಿಯಲಾರಂಭಿಸಿತು. ಉಷ್ಣವಲಯದ ನಿತ್ಯ ಹಸುರು ಕಾಡುಗಳಲ್ಲಿ ಮಳೆ ಕಾಲ ಕ್ರಮೇಣ ಕಡಿಮೆಯಾಗತೊಡಗಿದೆ ಎಂಬ ವೈಜ್ಞಾನಿಕ ಸತ್ಯವನ್ನು ಇಲ್ಲಿ ವ್ಯಕ್ತ ಪಡಿಸಿದ್ದಾರೆ. ಸರ್ಕಾರದ ಹಲವಾರು ರೀತಿ ನೀತಿಗಳು ಸಹ, ಅರಣ್ಯ ನಾಶಕ್ಕೆ ಕಾರಣವಾಗಿವೆ ಎಂದು ನಿಲುವನ್ನು ಸಹ ಸಮರ್ಥಿಸುತ್ತಾ ಅರಣ್ಯ ನಾಶದಿಂದಾಗಿ ಮಳೆ ಕಡಿಮೆಯಾಗಿ, ಏರುಪೇರಾದ ಮಳೆಚಕ್ರ (water cycle) ವನ್ನು ಮಳೆ ಮತ್ತು ಕಾಡಿನ ಪರಸ್ಪರ ಸಂಬಂಧವನ್ನು ಅತ್ಯಂತ ಸರಳವಾಗಿ ವಿವರಿಸಿದ್ದಾರೆ.

``ದೂರದಲ್ಲಿ ಸರಿದಾಡುವ ಮಳೆ ಮೋಡಗಳನ್ನು ಸುರಿಯುವಂತೆ ಮಾಡುವುದಿಲ್ಲ. ಮೋಡಗಳ ಉತ್ಪತ್ತಿಗೆ ಕಾಡು ಅವಶ್ಯಕ. ಗಾಳಿಯಿಲ್ಲದ ನೀಲಗಗನದಲ್ಲಿ ಎಲೆಗಳಿಂದ ಹೊರಬಂದ ಆವಿ ತೇವ ಕವಿಯುತ್ತದೆ; ಆವಿಯ ಉರಿ ಇನ್ನೂ ಹೆಚ್ಚಿನ ಸಂಗ್ರಹಣೆ ಸಾಧ್ಯವಿಲ್ಲದೆ ಹೋದಾಗ ಮೋಡಗಳು ಆವಿಯ ರೂಪದಲ್ಲಿ ಅಡಗಿಸಿಟ್ಟುಕೊಂಡಿದ್ದ ನೀರೆಲ್ಲವನ್ನು ಮಳೆಯಾಗಿ ಸುರಿಸುತ್ತವೆ. ಹಾಗೆಯೇ ಮಧ್ಯಾಹ್ನದ ಮಳೆಯ ಆಡಂಬರವನ್ನು ವರ್ಣಿಸುತ್ತಾ ಇದ್ದಕ್ಕಿದ್ದಂತೆ ಬಿಸಿಲು ಕಾಯುವಾಗ ಎಲೆಗಳಿಂದ ಆವಿ ಎದ್ದು ತಿಳಿ ಮೋಡದಂತಾ ಮೋಡಗಳು ಚಲನೆ, ಗಾಳಿ ಮತ್ತು ವಾತಾವರಣದಲ್ಲಿ ಉಂಟಾಗುವ ಬದಲಾವಣೆಯನ್ನು ಸುಂದರವಾಗಿ ವರ್ಣಿಸುತ್ತಾ ವೈಜ್ಞಾನಿಕ ನೆಲೆಗಟ್ಟಿನ ಮೇಲೆ ವಿಶ್ಲೇಷಿಸಿದ್ದಾರೆ. ಮಳೆಯ ಬಿರುಸು ಗುಡುಗು ಸಿಡಿಲುಗಳ ಆರ್ಭಟವನ್ನು ಪ್ರಳಯತಾಂಡವ ದರ್ಶನ ಎಂದಿದ್ದಾರೆ. ಮಳೆ ನಿಂತ ನಂತರ ಗಿಡ ಮರಗಳ ತೂಗಾಟ, ಗಾಳಿ, ಪಕ್ಷಿಗಳ ಕೂಗು ಕಾಡಿನಲ್ಲಿ ಹಬ್ಬುವ ಸುವಾಸನೆ, ಬಿಸಿಲು ಹೊಳೆದಾಗ ನಿಸರ್ಗದಲ್ಲಿನ ವರ್ಣಮಯ ಸುಂದರ ಚಿತ್ತಾರವನ್ನು ಮನೋಜ್ಞವಾಗಿ ಬಣ್ಣಿಸಿದ್ದಾರೆ. (ಪುಟ 256 ಹಸಿರು ಹೊನ್ನು).

ಹೆಸರಾಂತ ಸಸ್ಯ ವಿಜ್ಞಾನಿ ಬಿ.ಜಿ.ಎಲ್. ಸ್ವಾಮಿಯವರ ``ಹಸುರು ಹೊನ್ನು`` ಕನ್ನಡ ಸಾಹಿತ್ಯ ಲೋಕಕ್ಕೆ ಒಂದು ಅಮೂಲ್ಯ ಕೊಡುಗೆ ಇದ್ದಂತೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪುರಸ್ಕೃತ ಈ ಕೃತಿ ಸಸ್ಯಶಾಸ್ತ್ರ ಅಧ್ಯಯನದ ದೃಷ್ಟಿಯಿಂದ ಕೂಡ ಮುಖ್ಯವೆನಿಸುತ್ತದೆ. ವಿಜ್ಞಾನ ವಿಷಯವನ್ನೊಗೊಂಡಂತೆ ಕನ್ನಡದಲ್ಲಿ ಮೂಡಿಬಂದಿರುವ ಸೃಜನಶೀಲ ಮಾಹಿತಿಯುಕ್ತ ಪುಸ್ತಕ ಇದಾಗಿದೆ. ಇಲ್ಲಿ ಸಾಹಿತ್ಯವೂ ವಿಜ್ಞಾನವೂ ಒಟ್ಟಿಗೆ ಮೇಳೈಸಿದೆ. ಪುರಾತನ ಕಾಲದಿಂದಲೂ ಮಾನವನ ಬದುಕಿನಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಒಡನಾಡಿಗಳಾಗಿ ಬೆಳೆದು ಬಂದಿರುವ ಕೆಲವು ಸಸ್ಯಗಳ ಪರಿಚಯ ಮಾಡಿಕೊಡುವುದು ತಮ್ಮ ಪ್ರಯತ್ನ ಎಂದಿರುವ ಸ್ವಾಮಿಯವರು ತಮ್ಮ ಪುಸ್ತಕದಾದ್ಯಂತ ಆನೆಹುಲ್ಲು ಮಜ್ಜಿಗೆ ಹುಲ್ಲಿನಿಂದ ಹಿಡಿದು ಶಿಲೀಂದ್ರ ಅಥವಾ ಅಣಬೆ ಜಾತಿಗೆ ಸೇರಿದ ಕಸ್ಯಾಸ್ತ್ರಿಯನ್ನೊಳಗೊಂಡಂತೆ, ಮಾಧವೀಲತೆ, ಸಾಕೆಂಡ್ರ ಬಗನೀ, ಡೈನೇರಿಯ, ಬಲಮುರಿ,

ಪ್ರತಂಜೀವ, ಜಾಯಿಕಾಯಿ ಪತ್ರೆ, ಕದಂಬ, ರುದ್ರಾಕ್ಷಿ, ಸಪ್ತಪರ್ಣಿ, ಸರ್ಪಗಂಧಿ, ಭದ್ರಾಕ್ಷಿ, ನಾಗಸಂಪಿಗೆ, ಪಾದರಿ, ಹಾಲೆ, ತೇಗ ಗೌರಿಹೂ, ಬೂರಗ, ಅಶೋಕ, ನೆಲ್ಲಿ ಜೀರ್ಕಾ, ಕವಲು, ತಮಾಲ (ಲವಂಗ) ಮೆಣಸು, ಮೆಣಸಿನಕಾಯಿ, ತಾಲ, ಶ್ರೀತಾಲ, ಅಸಿಟಾಬುಲೇರಿಯಾ, ಅನಡಿಯಾಮಿನಿ, ಜೆಲೆಡಿಯಂ, ಗೋಡಂಬಿ, ಕೇಡಗೆ, ಜಾಪಾಳ, ನೆಗ್ಗಿಲು, ವಿಂಕಾರೋಸಿಯ, ಅಶ್ವತ್ಥ, ಕಮಲ, ಕುಮುದ, ಅಡಕೆ, ಗ್ಲೋರಿಯೋಸ್, ಬಕುಳ, ಹಲಸು, ಮಾವು ಹೀಗೆ ನೂರಾರು ಗಿಡ ಮರ ಬಳ್ಳಿಗಳ ಪರಿಚಯವನ್ನು ಅವುಗ ಳ ಎತ್ತರ, ಆಕಾರ, ಬೆಳೆಯುವ ಪ್ರದೇಶ, ಎಲೆಗಳ ರಚನೆ, ಹೂವುಗಳ ರಚನೆ, ಬಿರಿಯುವ ಕಾಲ, ಅವುಗಳ ಬಣ್ಣ ಮತ್ತು ರಚನೆ, ಕಾಯಿಗಳು, ಅವುಗಳ ರಚನೆ, ಹಣ್ಣು ಮತ್ತು ಅದರ ಸ್ವಾದ ಇತ್ಯಾದಿ ವಿವರಗಳ ಸಹಿತ ಪರಿಚಯಿಸುತ್ತಾರೆ. ಜೊತೆಯಲ್ಲಿ ಸ್ವಾಮಿಯವರೇ ಬರೆದ ಸಸ್ಯಗಳ ಚಿತ್ರಗಳು ಓದುಗರಿಗೆ ಆ ಗಿಡದ ಸಚಿತ್ರಣ ಮುಡಿಸುತ್ತವೆ.

ಸ್ವಾಮಿಯವರು ಸಸ್ಯಗಳ ಪರಿಚಯವನ್ನು ಮಾಡುಸುವ ಜೊತೆಯಲ್ಲಿಯೇ ಅಲ್ಲಿ ನೆಡೆದಿದ್ದ ಘಟನೆಯನ್ನು ನವಿರು ಹಾಸ್ಯ ಲೇಪನದೊಂದಿಗೆ ಬಣ್ಣಿಸುವ ಪರಿಯಂತೂ ಅಪೂರ್ವವಾದುದ್ದು. ಕೆಲವೊಮ್ಮೆ ಇತಿಹಾಸ ಪುರಾಣಗಳಿಂದಲೂ ಆ ಸಸ್ಯಗಳ ಬಳಕೆ ಮತ್ತು ಪ್ರಾಮುಖ್ಯತೆಯ ಪ್ರಸಂಗಗಳನ್ನು ಉಲ್ಲೇಖಿಸಿದ್ದಾರೆ.

ಕಾಡಿನಲ್ಲಿ ಸಸ್ಯಗಳು ನೈಸರ್ಗಿಕವಾಗಿ ಬೆಳೆಯುವ ವಿಧಾನ ಮತ್ತು ಆ ಸಸ್ಯಗಳ ಮೇಲೆ ಆಹಾರಕ್ಕಾಗ್ಗಿಯೋ ವಸತಿಗಾಗಿಯೋ ಆಶ್ರಯಿಸುವ ಇತರ ಜೀವ ಜಂತುಗಳ ಮಾಹಿತಿಯನ್ನು ನೀಡಿದ್ದಾರೆ. ಸಸ್ಯಗಳನ್ನು ಅವುಗಳ ಎಲೆ, ಹೂವುಗಳ ರಚನೆಯ ಆಧಾರದ ಮೇಲೆ ಗುರುತಿಸಿ, ನಾಮದ್ವಯದೊಂದಿಗೆ (Binomial nomenclature) ವಿಂಗಡಿಸುವ ಕ್ರಮದಲ್ಲಿ ನಾಮದ್ವಯದ ಮೊದಲನೆ ಭಾಗವಾಗಿ ಪ್ರಧಾನ ಜಾತಿಯ (genus) ಹೆಸರನ್ನು ಒಳಗೊಂಡಿರುತ್ತದೆ. ಎರಡನೆಯ ಭಾಗ ಪ್ರಭೇದದ (species) ಹೆಸರನ್ನು ಒಳಗೊಂಡಿರುತ್ತದೆ ಎಂಬುದನ್ನು ಸ್ವಾಮಿಯವರು ``ಹಸುರು ಹೊನ್ನು`` ವಿನಲ್ಲಿ ನಮೂದಿಸಿದ್ದಾರೆ. ಈ ಪುಸ್ತಕದಲ್ಲಿ ಕಂಡು ಬಂದಿರುವ ಸಸ್ಯಗಳಿಗೆ ಅವುಗಳ ಸಾಮಾನ್ಯ ಹೆಸರಿನೊಂದಿಗೆ ವೈಜ್ಞಾನಿಕ ಹೆಸರನ್ನು ಪರಿಚಯಿಸುವ ಸಫಲ ಪ್ರಯತ್ನವೂ ಇದರಲ್ಲಿದೆ.

ವಿದ್ಯಾರ್ಥಿಗಳ ಶೈಕ್ಷಣಿಕ ಪ್ರವಾಸದ ಸಂದರ್ಭದಲ್ಲಿ ಸರಿಯಾಗಿ ಗುರುತಿಸದೆ ಮತ್ತೊಂದು ಪ್ರಧಾನ ಜಾತಿಯೊಂದಿಗೆ ಸೇರಿಸಲಾಗಿದ್ದ ಸಸ್ಯವೊಂದನ್ನು ಗುರುತಿಸಿ ಅದರ ಹೂವಿನ ರಚನೆ ಮತ್ತು ಆಕಾರದ ಮೇಲೆ ಪುನ: ಗುರುತಿಸಿ, ಸ್ವಾಮಿಯವರು ಅಮೇರಿಕಾದಲ್ಲಿ ತಮ್ಮ ಗುರುಗಳಾಗಿದ್ದ ಪಿತೃಸ್ಥಾನದಲ್ಲಿದ್ದ ಪ್ರೊ. ಆರ್‌ವಿಂಗ್, ಡಬ್ಲೂ ಬೈಲಿಯವರು ನಗ್ನ ಬೀಜ ಗಿಡಗಳ ಕುರಿತು ನಲವತ್ತು ವರ್ಷಗಳಿಂದಲೂ ಸಂಶೋಧನೆ ನಡೆಸಿ, ಅನೇಕ ಹೊಸ ವಿಷಯಗಳನ್ನು ಬೆಳಕಿಗೆ ತಂದಿದ್ದ ಅವರ ಗೌರವಾರ್ಥವಾಗಿ, ಅವರಿಂದ ಕಲಿತ ಪಾಠದ ನೆನಪಿಗಾಗಿ ಆ ಹೊಸ ಗಿಡಕ್ಕೆ ಸಾರ್‍ಯಾಂಡ್ರ ಆರ್‌ವಿಂಗ್

ಬೈಲಿಯೈ (sarcandra Irving Baileyi) ಎಂದು ಹೆಸರಿಸಿರುವುದೂ ಸಹ ಈ ಪುಸ್ತಕದಲ್ಲಿ ನಮೂದಿಸಲ್ಪಟ್ಟಿದೆ. ಜಗತ್ತಿನ ಸಸ್ಯಶಾಸ್ತ್ರದ ದೃಷ್ಟಿಯಿಂದ ಇದೊಂದು ಪ್ರಾಮುಖ್ಯ ಹಂತವೆಂದೇ ಹೇಳಬಹುದು. ಈ ನಿಟ್ಟಿನಲ್ಲಿ ಈ ಪುಸ್ತಕ ಅತ್ಯಂತ ಮೌಲ್ಯಯುಕ್ತವಾಗಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ ಸಸ್ಯಶಾಸ್ತ್ರದಲ್ಲಿ ಪದವಿ ಪಡೆದು ನಂತರ ಸ್ನಾತಕೋತ್ತರ ಪದವಿ ಅಭ್ಯಾಸಿಸುತ್ತಿದ್ದ ವಿದ್ಯಾರ್ಥಿಗಳು, ಅನೇಕ ಸಸ್ಯಗಳ ಬಗ್ಗೆ ಪುಸ್ತಕಗಳಲ್ಲಿ ಓದಿ ತಿಳಿದಿದ್ದರೂ ಕೂಡ ಆ ಸಸ್ಯಗಳನ್ನು ಅವುಗಳ ನೈಸರ್ಗಿಕ ನೆಲೆಯಲ್ಲಿ ಕಣ್ಣಾರೆ ಕಂಡಾಗ ಗುರುತು ಹಿಡಿಯಲು ಅವರಿಂದ ಸಾಧ್ಯವಿಲ್ಲದಿದ್ದದ್ದು ಅವರು ಆ ಸಸ್ಯದ ಎಲೆಯನ್ನೋ, ಹೂವನ್ನೋ, ಕಾಯನ್ನೋ ಚಿವುಟಿ ಹೊಸಗಿ ಮೂಸಿ ನೋಡಿ ಇಲ್ಲ ರುಚಿ ನೋಡಿ ಆ ಸಸ್ಯ ಯಾವುದೆಂದು ಕಂಡು ಹಿಡಿದವರಿಗೆ ಸ್ವಾಮಿಯವರು ಬೇಸರ ವ್ಯಕ್ತ ಪಡಿಸಿದ್ದಾರೆ.

ವರ್ಗೀಕರಣ ವಿಧಾನ ಜೀವಶಾಸ್ತ್ರದ ಮಾತೃ (Taxonomy is the mother of biological sciences) (ಪುಟ 298 ಹಸಿರು ಹೊನ್ನು). ಆದರೆ ಅಲ್ಲಿನ ಅರಣ್ಯದಲ್ಲಿ ಗಾರ್ಡ್ ಆಗಿ ಕಾರ್ಯನಿರ್ವಹಿಸುತ್ತಿದ್ದ ವ್ಯಕ್ತಿಗೆ ಅಕ್ಷರ ಜ್ಞಾನವಿಲ್ಲದಿದ್ದರೂ ಗಿಡಗಳನ್ನು ಗುರುತಿಸುವಲ್ಲಿ, ಅವುಗಳ ಉಪಯೋಗಗಳ ಬಗ್ಗೆ ಅಸಾಧಾರಣ ಜ್ಞಾನವಿತ್ತು ಎಂಬುದು ತಿಳಿಯುತ್ತದೆ.

ಪರಿಸರ ವಿಜ್ಞಾನದ ಅರಿವನ್ನು ಮೂಡಿಸುವಲ್ಲಿ ಸಹ ಈ ಪುಸ್ತಕ ಸಹಕಾರಿಯಾಗಿದೆ. ಹತ್ತು ಹಲವು ಔಷಧೀಯ ಸಸ್ಯಗಳ ಮಾಹತಿಯನ್ನು ಒಳಗೊಂಡ ಈ ಪುಸ್ತಕದಲ್ಲಿ ಸ್ವಾಮಿಯವರು ಆಧುನಿಕತೆಯ ದಾಳಿಗೆ ಒಳಗಾಗಿ, ಅಭಿವೃದ್ಧಿ ಕಾರ್ಯಗಳ ಹೆಸರಿನಲ್ಲಿ ನಾಶಗೊಳ್ಳುತ್ತಿರುವ ಪರಿಸರದ ಕುರಿತು ಕಾಳಜಿ ವ್ಯಕ್ತ ಪಡಿಸುತ್ತಾರೆ. ಸಸ್ಯ ಸಂಗ್ರಹಣೆಯಿಂದ ಹಿಡಿದು, ವರ್ಗೀಕರಿಸಿ ಹೆಸರಿಸುವುದರೊಂದಿಗೆ, ವಿಕಾಸವಾದ, ಭೌಗೋಳಿಕ ಪರಿಸರ ಹೀಗೆ ಎಲ್ಲಾ ಜೀವಶಾಸ್ತ್ರದ ಅಂಶಗಳನ್ನು ವಿವರವನ್ನು ಈ ಒಂದು ಪುಸ್ತಕದಲ್ಲಿ ಕಾಣಬಹುದಾಗಿದೆ.

ಆಗುಂಬೆಯ ಮಳೆಕಾಡುಗಳ ಬಗ್ಗೆ ವಿಶೇಷವಾದ ಒಲವಿದ್ದ ಸ್ವಾಮಿಯವರು ಪಶ್ಚಿಮ ಘಟ್ಟಗಳ ಪ್ರಕೃತಿಯನ್ನು ಒಬ್ಬ ವಿಜ್ಞಾನಿಯ ದೃಷ್ಟಿಯಿಂದ ಅತ್ಯಂತ ಸೂಕ್ಷ್ಮವಾಗಿ ಅಭ್ಯಾಸ ಮಾಡಿ ತಾವು ಸಂಶೋಧನೆ ನೆಡೆಸಿ ಪಡೆದಿದ್ದ ಜ್ಞಾನವನ್ನು ಬಳಸಿಕೊಂಡು, ಈ ಪುಸ್ತಕದಲ್ಲಿ ತಿಳಿಸಿಕೊಟ್ಟಿದ್ದಾರೆ. ಕೇವಲ ಸಸ್ಯಶಾಸ್ತ್ರವೊಂದು ಅಲ್ಲದೇ ಪರಿಸರದ ದೃಷ್ಟಿಯಿಂದ ಸಹ ಮುಖ್ಯವೆನಿಸುವ ಈ ಕೃತಿಯು ಉಷ್ಣವಲಯದ ಶೋಲಾ ಮಳೆಕಾಡುಗಳ ಹೇರಳ ಮಾಹಿತಿಯನ್ನು ನೀಡುತ್ತದೆ.

ಆ ಮರಗಿಡಗಳು ಹೂ ತಳೆದಾಗ ಆ ಮರಗಳ ಸಾಲುಗಳು ನೋಡಲು ಅತ್ಯಂತ ಸುಂದರವಾಗಿದ್ದು, ಹೂವಿನ ಬಣ್ಣವನ್ನು ಮತ್ತು ಅದರ ಪರಿಮಳವನ್ನು ವರ್ಣಿಸಿದ್ದಾರೆ. ತೇಗದ ಗಿಡವನ್ನು ಅವರು ವರ್ಣಿಸುವ ರೀತಿಯೇ ಅನೂಪವಾದದ್ದು. ತೇಗ ಹೂ ತಳೆದಿರುವುದನ್ನು ತೇಗ ಹೊಳೆದಿತ್ತು

ಎಂದಿದ್ದಾರೆ. ಸಾಗುವಳಿ ಕಾಡಿನ ಎಲ್ಲಾ ಮರಗಳೂ ಒಂದೇ ಸಲ ಹೂವು ತಳೆವುದು ವಿಶೇಷವೇ. ಆಗ ಸಕ್ಕೊಂಡು ಚೆಲುವಾದ ಕಸೂತಿಯ ಅಂಚನ್ನು ಹೋಲೆದಂತೆ ಕಾಣುತ್ತದೆ ಎನ್ನುತ್ತಾರೆ. ತೇಗದ ವೈಜ್ಞಾನಿಕ ಹೆಸರು ಟೆಕ್ಟೋನ ಗ್ರ್ಯಾಂಡಿಸ್.

ಬಿ.ಜಿ.ಎಲ್.ಸ್ವಾಮಿಯವರು ಗ್ರ್ಯಾಂಡಿಸ್ ಎಂದರೆ ಮರದ ನಿಲುವೂ ಗ್ರ್ಯಾಂಡು ಮರದ ಹೂವೂ ಗ್ರ್ಯಾಂಡು, ಹೂ ತಳೆದ ತೇಗದ ತೋಪು ಗ್ರ್ಯಾಂಡು ಎಂದಿದ್ದಾರೆ. ಅರಣ್ಯಕ ಭಾಷೆಯಲ್ಲಿ ತೇಗವು ಚೌಬೀನೆ ಮರಗಳ ರಾಜ. ಇತರೆ ಚೌಬೀನೆಗಳ ಗುಣಾವಗಳನ್ನು ಅಳೆಯುವುದಕ್ಕೆ ತೇಗವೇ ಅಳತೆಗೋಲು , (ಪುಟ-241 ಹಸುರು ಹೊನ್ನು)

ತೇಗದ ಮರದ ಗುಣಲಕ್ಷಣ, ಅದರಿಂದಾಗಬಹುದಾದ ಉಪಯೋಗ ಇತ್ಯಾದಿ ವಿವರಗಳನ್ನು ಸವಿವರವಾಗಿ ಈ ಅಧ್ಯಯನದಲ್ಲಿ ಕಟ್ಟಿ ಕೊಡುತ್ತಾರೆ. ತೇಗದ ಮರಗಳ ಸಂಖ್ಯೆ ಕಡಿಮೆಯಾಗುತ್ತಿದೆ ಎಂಬ ಸಂಗತಿಯನ್ನು ಸಹ ಅವರು ಇಲ್ಲಿ ವ್ಯಕ್ತ ಪಡಿಸಿದ್ದಾರೆ.

``ಶತಮಾನಗಳಿಂದ ಮಾನವನ ಸೇವೆ ಮಾಡಿ ಅವನಿಂದ ಸಾಕಷ್ಟು ಪ್ರತ್ಯುಪಕಾರವನ್ನು ಪಡೆಯದೆ ತೇಗದ ಬೆಳೆ ಕ್ಷೀಣಿಸುತ್ತಾ ಬಂದಿದೆ. ಐವತ್ತು ಅರವತ್ತು ವರ್ಷಗಳ ಹಿಂದೆ ತೇಗದ ಮರವನ್ನು ಕಡಿಯಬೇಕಾದರೆ ಆ ಬೆಳೆಗೆ ಎಪ್ಪತ್ತು ವರ್ಷವಾದರೂ ಆಗಿರಬೇಕೆಂದು ತೀರ್ಮಾನ ಮಾಡಿಕೊಂಡಿದ್ದರು. ಅಲ್ಲಿಂದ ಈಚೆಗೆ ಎರಡು ಮಹಾಯುದ್ಧಗಳು ಸಂಭವಿಸಿದವು. ಯುದ್ದ ಸಂಬಂಧವಾಗಿ ತೇಗದ ಉಪಯೋಗ ಹೆಚ್ಚಾಯಿತು. ಜನರು ಬೇಕುಗಳು ಅಧಿಕರಿಸಿದವು. ನಿಲಂಬೂರಿನ ಕೆಲವು ತೋಪುಗಳನ್ನು ಬಿಟ್ಟರೆ ಈಗ ಮೂವತ್ತು ವರ್ಷಕ್ಕೆ ಮೀರಿ ಬೆಳೆದ ಮರಗಳನ್ನು ಕಾಣುವುದೇ ಅಪರೂಪವಾಗಿ ಬಿಟ್ಟಿದೆ. ಹದಿನೈದು ವರ್ಷದ ಮರಗಳನ್ನೇ ಕಡಿದು ಮಾರುವ ಸ್ಥಿತಿ ಅನಿವಾರ್ಯವಾಗಿದೆ. (ಪುಟ-242 ಹಸುರು ಹೊನ್ನು).

ಈ ಮೇಲೆ ಉಲ್ಲೇಖಿತವಾಗಿರುವ ಪುಟಗಳಲ್ಲಿ ಬಿ.ಜಿ.ಎಲ್.ಸ್ವಾಮಿಯವರು ತೇಗದ ಮರದ ಸೌಂದರ್ಯವನ್ನು ಆಸ್ವಾದಿಸುತ್ತಾ ವರ್ಣನೆ ಮಾಡುವುದರೊಂದಿಗೆ ಅದರಿಂದಾಗುವ ಉಪಯೋಗಗಳ ಮಹಾಪೂರವನ್ನು ತಿಳಿಸಿಕೊಡುತ್ತಲೇ ತೇಗದ ಮರವನ್ನು ಮಾನವ ತನ್ನ ಅಗತ್ಯಗಳ ಪೂರೈಕೆಗಾಗಿ ಕಡಿದು ವಿನಾಶಗೊಳಿಸುತ್ತಿರುವ ಬಗ್ಗೆ ಕಳವಳ ವ್ಯಕ್ತಪಡಿಸಿದ್ದಾರೆ. ಇದು ಪರಿಸರ ವಿನಾಶದೆಡೆಗೆ ಅವರು ತೋರುವ ಕಾಳಜಿಯನ್ನು ಸೂಚಿಸುತ್ತದೆ.

ಆಗುಂಬೆಯ ಮಳೆಕಾಡುಗಳಲ್ಲಿ ಕಂಡು ಬರುವ ನೆಲ ಆರ್ಕಿಡ್ ಸಸ್ಯಗಳ ಅಂಗರಚನೆಯಿಂದ ಹಿಡಿದು ಅದರ ಹೂವಿನ ಬಣ್ಣ, ದಳದ ವಿನ್ಯಾಸ, ಸುವಾಸನೆ ಬಗ್ಗೆ ಚಿತ್ರದೊಂದಿಗೆ ಸಹ ವಿವರಿಸಿದ್ದಾರೆ. `` ನೆಲದ ಕೆಳಗೆ ಸಣ್ಣ ಗಡ್ಡೆಯೊಂದಿರುತ್ತದೆ. ಗಡ್ಡೆಯಿಂದ ಎರಡು ಮೂರಡಿ ಎತ್ತರದ ಕಾಂಡವೊಂದು ನೆಲದ ಮೇಲೆ ಕಾಣಿಸಿಕೊಳ್ಳುತ್ತದೆ. ಕಾಂಡದ ಮೇಲೆ ವಿರಳವಾಗಿ

ಅಂಟಿಕೊಂಡಿರುವ ನಾಲ್ಕೈದು ಎಳೆಗಳು ಕಾಂಡದ ಕೊನೆಯಲ್ಲಿ ಐದಾರು ಹೂಗಳು: ಹೂವಿನಬಣ್ಣ ಶುಭ್ರ ಬಿಳುಪು. ಒಂದೊಂದು ಹೂವು ಎರಡು ಎರಡೂವರೆ ಅಂಗುಲ ಅಗಲ. ವಿಚಿತ್ರವಾಗಿ ವಿನ್ಯಾಸ ಗೊಂಡ ದಳ ಸಮೂಹ ಒಂದು ದಳದಿಂದ ಮಾತ್ರ ನೀಳವಾದ ನಳಿಗೆಯ ಚೀಲವೊಂದು ಬಾಲದಂತೆ ತೂಗುತ್ತಿರುತ್ತದೆ. ಇಂಥ ಚೆಲುವಿನ ಹೂವು ಅತಿ ಮಧುರವಾಗಿ ಸುವಾಸನೆಯನ್ನು ಹೊಮ್ಮುತ್ತದೆ. ಈ ಚೆಲುವು ಹೂವಿಗೆ ಇನ್ನೂ ಚೆಲುವಾದ ಅನ್ವರ್ಥದಂತಿರುವ ಹೆಸರುಗೌರಿ ಹೂ(platanthera susannae) (ಪುಟ 250 ಹಸಿರು ಹೊನ್ನು).

ಕಾಡಿನಲ್ಲಿ ಸಾಮಾನ್ಯವಾಗಿ ಬೆಳೆಯುವ ಔಷಧಿಯ ಗುಣವುಳ್ಳ ಸಸ್ಯಗಳ ಪ್ರಸ್ತಾಪವೂ ಹಸುರು ಹೊನ್ನುವಿನಲ್ಲಿದೆ.

ಉದಾ:- ಈ ಹುಲ್ಲು ಜಾತಿಗೆ ಸಿಂಬೊಪೊಗಾನ್ (cymbopogon) ಎನ್ನುತ್ತೇವೆ ಕನ್ನಡದಲ್ಲಿ ಇದನ್ನು ಮಜ್ಜಿಗೆ ಹುಲ್ಲು ಎನ್ನುತ್ತಾರೆ. ಎಲೆಗಳಲ್ಲಿ ಒಂದು ಬಗೆಯ ಸುಗಂಧ ತೈಲ ಸೇರಿಕೊಂಡಿರುತ್ತದೆ. ಸ್ವಲ್ಪ ಉಜ್ಜಿದರೆ ಸಾಕು ನಿಂಬೆಹಣ್ಣಿನ ವಾಸನೆ ಹೊಮ್ಮುತ್ತದೆ. ಈ ತೈಲಕ್ಕೆ ಲೆಮನ್ ಗ್ರಾಸ್ ಆಯಿಲ್ (lemon grass oil) ಎಂಬ ಪದ ವಾಣಿಜ್ಯದಲ್ಲಿ ಪ್ರಚುರವಾಗಿದೆ. ಸಾಬೂನು ಕೈಗಾರಿಕೆಯಲ್ಲಿ ಈ ತೈಲದ ಉಪಯೋಗ ಹೆಚ್ಚು. ಈ ಚೀಚೆಗೆ ಬಳಕೆಗೆ ಬಂದಿರುವ ಇನ್ನೊಂದು ಗುಣ ಕೀಟ ವಿಕರ್ಷಣೆ (Insect repellent) ಎಂದರೆ ಸೊಳ್ಳೆ ಮೊದಲಾದ ಕೀಟಗಳು ಈ ವಾಸನೆಗೆ ಓಡಿ ಹೋಗುತ್ತವೆಯಾದ್ದರಿಂದ ನಿದ್ರಾಭೋಗ ಸಾಂಗವಾಗಿ ನೆರವೇರುತ್ತದೆ. ಸೊಳ್ಳೆ ಪರದೆಯಲ್ಲಿ ಹುದುಗಿ ಕೊಳ್ಳಬೇಕಾದ ಅನಿವಾರ್ಯ ತೊಲಗುತ್ತದೆ. (ಪುಟ - 259-260 ಹಸಿರು ಹೊನ್ನು).

``ಆಗುಂಬೆಯ ಕಾಡುಗಳ ಪಶ್ಚಿಮ ಘಟ್ಟದ ಕಾಡುಗಳಲ್ಲಿ ಕಂಡು ಬರುವ ಅಪರೂಪದ ಅಣಬೆ ಡಿಕ್ಟಯೋಪೋರ (dictiophora) ಅದನ್ನು ಬಿ.ಜಿ.ಎಲ್.ಸ್ವಾಮಿಯವರು ಕಾಲಿಟ್ಟರೆ ಒಂದಡಿ ಹೂತು ಹೋಗುವಷ್ಟು ಜೌಗು. ಜೌಗಿನಲ್ಲಿ ಕೊಳೆತು ನಾರುತ್ತಿದ್ದ ತರಗೆಲೆಗಳ ಮೇಲೆ ಕನ್ಯಾಸ್ತ್ರೀ ಬೆಡಗಿನಿಂದ ಬೆಳೆದು ನಿಂತಿದ್ದಳು`` ಎಂದು ಸುಂದರ ವಿವರಣೆಯನ್ನು ನೀಡುತ್ತಾರೆ. ಅವರೇ ಹೇಳುವಂತೆ ತಮ್ಮ ಇಪ್ಪತ್ತೈದು ವರ್ಷಗಳ ಸಸ್ಯ ಸಂಗ್ರಹಣೆಯ ತಿರುಗಾಟದಲ್ಲಿ ಒಮ್ಮೆ ಮಾತ್ರ ಒಂದೇ ಒಂದು ಅಣಬೆಯನ್ನು ಕೇರಳದ ಕಾಡುಗಳಲ್ಲಿ ಕಂಡಿದ್ದರಂತೆ, ಆದರೆ ಅವರು ಆಗುಂಬೆಯ ಕಾಡಿನಲ್ಲಿ ಹದಿನೈದು ಮಾದರಿಗಳನ್ನು ಕಂಡಿದ್ದಾಗಿ ದಾಖಲಿಸಿದ್ದಾರೆ. ಆ ಅಣಬೆ ಪ್ರಭೇದದ ದೈಹಿಕ ರಚನೆ, ಸಂತಾನಾಭಿವೃದ್ಧಿ ಮತ್ತು ಜೀವಿತಾವಧಿ ಹೀಗೆ ಎಲ್ಲಾ ಮಾಹಿತಿಯನ್ನು ಕೂಲಂಕುಷವಾಗಿ ನೀಡಿದ್ದಾರೆ.

ಬಗನಿ ಮರದ ಪ್ರಸ್ಥಾಪ ಕುವೆಂಪುರವರ ಮಲೆಗಳಲಿ ಮದುಮಗಳು ಕಾದಂಬರಿ ಮತ್ತು ಹಸುರು ಹೊನ್ನು ಎರಡರಲ್ಲೂ ಬಿ.ಜಿ.ಎಲ್.ಸ್ವಾಮಿ ಬಗನಿ ಸಸ್ಯದ ಬಗ್ಗೆ ಸಂಕ್ಷಿಪ್ತ ಮಾಹಿತಿ ನೀಡಿದ್ದಾರೆ. ಬಗನಿ ತೆಂಗಿನ ಜಾತಿಗೆ ಸೇರಿದ ಮರ. ಇದು ರಚನೆಯಲ್ಲಿ ಅಡಿಕೆ ಅಥವಾ ತೆಂಗಿನ ಮರವನ್ನು ಹೋಲುತ್ತದೆ. ಈ ಮರದಿಂದ ಹೆಂಡ ತಯಾರಾಗುತ್ತದೆ.

ಸ್ವಾಮಿಯವರು ಬಿದಿರು ಮಳೆಗಳ ಬಳಿ ನೀರ ಕೋಡಿ ಹರಿಯುತ್ತಿದ್ದ ಕಡೆ ಅಪರೂಪದ ಸಸ್ಯಗಳ ಸಂಗ್ರಹಣೆಗಾಗಿ ಹುಡುಕಾಡುತ್ತಿದ್ದಾಗ ಜರಿಗಿಡದ ಗುಂಪಿಗೆ ಸೇರಿದ ಪ್ರಾಥಮಿಕ ಸಸ್ಯ ಸ್ವರೂಪವಾದ ಸೈಲೋಟಮ್ (Psilotum) ಹೆಸರಿನ ಗಿಡ ದೊರಕಿತು. ಅದು ಕೇವಲ 4-10 ಅಂಗುಲ ಎತ್ತರ ಹೊಂದಿದ್ದು, ಬೇರುಗಳಿಂದ ಕೂಡಿದ ಅಪರೂಪದ ಸಸ್ಯ. ಈ ಸಸ್ಯದ ಕಾಂಡ ಕವಲೊಡೆದು ಬಿದಿರಿನ ಸೊಂದಿಗೊಂದಿಗಳಲ್ಲಿ ಹೂತು ಹೋಗಿರುತ್ತದೆ.

ಈ ಸಸ್ಯ ಬಿದಿರಿನ ಮೇಲೆ ಆಶ್ರಯ ಹಾಗು ಆಹಾರಕ್ಕಾಗಿ ಅವಲಂಬಿತವಾಗಿರುತ್ತದೆ. ಇಲ್ಲಿ ಒಂದು ಸಸ್ಯ ಪ್ರಭೇದವು ಮತ್ತೊಂದರ ನಡುವಿನ ಅವಿನಾಭವ ಸಂಬಂಧವನ್ನು ತಿಳಿಸಿಕೊಡುವ ಪ್ರಯತ್ನವನ್ನು ಸಹ ಬಿ.ಜಿ.ಎಲ್.ಸ್ವಾಮಿಯವರು ಮಾಡಿದ್ದಾರೆ. ಅಷ್ಟೇ ಅಲ್ಲದೆ ಆ ಸಸ್ಯದ ರಚನೆ, ಅದರ ಜೀವನ ಚಕ್ರವನ್ನು ಅತ್ಯಂತ ಕೂಲಂಕುಷವಾಗಿ ಒಬ್ಬ ಸಸ್ಯಶಾಸ್ತ್ರಜ್ಞನ ದೃಷ್ಟಿಕೋನದಿಂದ ವಿವರಿಸುತ್ತಾರೆ.

ಹೀಗೆ ಮುಂದುವರಿದು ಆಗುಂಬೆಗೆ ಹತ್ತು ಮೈಲಿ ದೂರದಲ್ಲಿ ನೆಲ್ಲಿಕಾಯಿಯ ಮರಗಳನ್ನು ಕಂಡರು. ಋಗ್ವೇದ ಕಾಲದಿಂದ ಅಮಲಾ, ಆಮಲಕಾ ಎಂದೇ ಪರಿಚಿತವಾದ, ಆಯುರ್ವೇದದ ಚರಕ ಸಂಹಿತೆಯ ಕಾಲದಿಂದಲೂ ಔಷಧಿಯಾಗಿ ಬಳಕೆಯಲ್ಲಿರುವ ಭೌದ್ದ ಬಿಕ್ಷುಗಳಿಗೆ ಪಥ್ಯಾಹಾರವಾದ ನೆಲ್ಲಿ ಅತ್ಯಾಧಿಕ ವಿಟಮಿನ್ `ಸಿ` ಯನ್ನು ತನ್ನೊಳಗೆ ಹೊಂದಿದೆ. ಸ್ವಾಮಿಯವರು, ನೆಲ್ಲಿಕಾಯಿಯನ್ನು ತಿಂದು ನೀರು ಕುಡಿದಾಗ ಆಗುವ ಅನುಭವವನ್ನು ಸಂಘ ಕವಿಗಳು ಬಣ್ಣಿಸಿರುವ ಬಗೆಯನ್ನು ಹೀಗೆ ಉಲ್ಲೇಖಿಸಿದ್ದಾರೆ `` ನೆಲ್ಲಿ ಕಾಯಿ ತಿಂದು ನೀರು ಕುಡಿದಾಗ ಅನುಭವವಾಗುಸ ಸಿಹಿ ಎಳೆ ಮಗುವಿಗೆ ತಾಯಿ ಮಾಡುವ ಮುದ್ದು ಮಾತುಗಳಿಂದ ಇನಿಯದಾಗಿರುತ್ತದೆಯೆಂದು ಸಂಘಕವಿಗಳು (ಅಹನಾನೂರು) ಹೇಳಿದ್ದು ಇಂದಿನ ಅನುಭವದಲ್ಲಿಯೂ ನಿಂತಿರುವುದೇ ಆಗಿದೆ. ನೆಲ್ಲಿಯ ಒಗರು ರುಚಿಯನ್ನು ಅವರು ಕಂಡಿದ್ದವರೇ (ನರ್‍ರಿಣೈ) `` (ಪುಟ-292 ಹಸಿರು ಹೊನ್ನು).

``ಹಸುರು ಹೊನ್ನು`` ವಿನಲ್ಲಿ ಮಲೆನಾಡಿನಲ್ಲಿ ಅಡುಗೆಗೆ ಹುಣಿಸೆಯ ಬದಲಾಗಿ ಬಳಸಲ್ಪಡುವ ಹುಳಿಯಲ್ಲಿ ಹುಣಸೆಯನ್ನೇ ಬಹುವಾಗಿ ಹೋಲುವ ಜೀರ್ಕ ಅಥವಾ ಕಾಂಜೀರ್ಕದ ಮರದ ಪರಿಚಯುವನ್ನು ಮಾಡಿಕೊಡುತ್ತಾರೆ. ``ಗಾರ್ಸಿನಿಯ (Garcinia) ಎಂಬ ಪ್ರಧಾನ ಜಾತಿಗೆ ಸೇರಿದವು 30-35 ಅಡಿ ಎತ್ತರ ಬೆಳೆಯುವ ಮರಗಳು, ಹೊಳೆ ಹೊಳೆಯುವ ಹಸುರೆಲೆಗಳನ್ನು ತಳೆದು ನಡುನಡುವೆ ಕಾಯಿಹಣ್ಣುಗಳನ್ನು ಬಿಟ್ಟಿದ್ದವು``.ಈಗ ಸಹ ಮಲೆನಾಡಿನ ಜನ ಅವುಗಳಸಂಗ್ರಹಣೆಯಲ್ಲಿ ತೊಡಗುತ್ತಾರೆ.

ಕವಲು ಮರದ (Careya arborea) ಅವರು ಕಂಡಾಗ ಹಸುರು ಬಣ್ಣದ ಕಾಯಿ ಬಿಟ್ಟಿತ್ತು. ಹಣ್ಣುಗಳು ನೇರಳೆ ಬಣ್ಣದವು, ಬೀಜವಂತೂ ವಿಷ ಎಂದು ಮಾಹಿತಿ ನೀಡಿ, ಸಸ್ಯ ಸಂಪತ್ತಿನ ಅನನ್ಯತೆಯ ಬಗ್ಗೆ ಸೋಜಿಗ ಮೂಡಿಸುತ್ತಾರೆ.

ಮಸಾಲೆ ಸಂಬಾರ ಪದಾರ್ಥಗಳ ಲಭ್ಯತೆಗೆ ಹೆಸರು ವಾಸಿಯಾದ ಪಶ್ಚಿಮ ಘಟ್ಟದ ಕಾಡುಗಳಲ್ಲಿ ಸಾಮಾನ್ಯವಾಗಿ ಹಲವಾರು ಪ್ರಭೇದಗಳು ಕಂಡು ಬರುತ್ತವೆ. ಕಾಡಿನೊಳಗೆ ಹರಡಿದ್ದ ಮೆಣಸಿನ ವಾಸನೆ, ಸುತ್ತಲೂ ಇದ್ದ ಕಾಳುಬಿಟ್ಟಿದ್ದ ಮೆಣಸಿನ ಬಳ್ಳಿಗಳು (piper nigrum) ಮತ್ತು ತಮಾಲ ಮರವನ್ನು ವಿದ್ಯಾರ್ಥಿಗಳಿಗೆ ಪರಿಚಯ ಮಾಡಿಸುತ್ತಾರೆ.

ತಮಾಲ ಮರದ ಎಲೆಗಳನ್ನು ಲವಂಗ ಪತ್ರೆಯೆಂದು ಸಾಮಾನ್ಯವಾಗಿ ಕರೆಯುತ್ತಾರೆ. ಅಡಿಗೆಗೆ ಇದರ ಎಲೆಗಳನ್ನು ಅಡಿಗೆಗೆ ವಾಸನೆ ಮತ್ತು ರುಚಿಗಾಗಿ ಬಳಸಲಾಗುತ್ತದೆ. ಪೈಪರೇಸಿ ಸಂಸಾರಕ್ಕೆ ಸೇರಿದ್ದ ಮೆಣಸು ದ್ವಿದಳ ಪಂಗಡದಾಗಿದ್ದು ಕ್ರಿ.ಪೂ.ನಾಲ್ಕನೇಯ ಶತಮಾನದಲ್ಲಿಯೇ ಭಾರತದ ಮೂಲಕ ರೋಮ್, ಗ್ರೀಸ್ ದೇಶಗಳಿಗೆ ರಫ್ತಾಗುತ್ತಿದ್ದ ಮಸಾಲೆ ಪದಾರ್ಥ ಮೆಣಸು ಮೂಲತ:ವಾಗಿ ದಕ್ಷಿಣ ಭಾರತದಲ್ಲಿ ಬೆಳೆಯುತ್ತಿದ್ದುದ್ದೆ? ಅಥವಾ ಮಲೇಶಿಯಾದಿಂದ ಬಂದದ್ದೆ ಎಂಬ ಬಗ್ಗೆ ನಿಖರವಾದ ಮಾಹಿತಿ ದೊರೆತಿಲ್ಲ ಎನ್ನುತ್ತಾರೆ.

ಮೆಣಸು ಹಿಂದಿನ ಕಾಲದಲ್ಲಿ ತುಂಬಾ ಬೆಲೆ ಬಾಳುವ ಪದಾರ್ಥಗಳಲ್ಲೊಂದಾಗಿತ್ತೆಂದು ಉಲ್ಲೇಖವಿದೆ. ``ಕ್ರಿ.ಶ. 176ನೇ ವರ್ಷದಲ್ಲಿ ಅಲೆಕ್ಸಾಂಡ್ರಿಯ ಬಂದರನ್ನು ಭಾರತದ ಮೆಣಸು ಸೇರಿದಾಗ ತೆರಿಗೆ ತೆರಬೇಕಾಗಿತ್ತು. ಹಿಂದಿನ ಕಾಲದಲ್ಲಿ ಮೆಣಸು ಕಪ್ಪ ಕಾಣಿಕೆಗಳಾಗಿ ಕೊಡುವ ವಸ್ತುವಾಗಿದ್ದಿತು. ಕ್ರಿ.ಶ. 1180 ರ ಸುಮಾರಿನಲ್ಲಯೇ ಇಂಗ್ಲೇಂಡಿನಲ್ಲಿ ಮೆಣಸು ಅಮದುದಾರರ ಸಂಸ್ಥೆ ಸ್ಥಾಪಿತವಾಗಿತ್ತು. ಭಾರತಕ್ಕೆ ಸಮುದ್ರ ಮಾರ್ಗವನ್ನು ಕಂಡು ಹಿಡಿಯಲು ಮೆಣಸಿನ ದುಬಾರಿ ಬೆಲೆಯೇ ಕಾರಣವಾಯಿತು .ಎಂಬ ವಿಷಯವನ್ನು ಸ್ವಾಮಿ ಸಮರ್ಥಿಸುತ್ತಾರೆ. ಅನೇಕ ಅಂಶಗಳಲ್ಲಿ ಅವರ ದೃಷ್ಟಿಕೋನ ಕುವೆಂಪು ದೃಷ್ಟಿಕೋನವನ್ನು ಹೋಲುತ್ತದೆ.

## 5.ಆಧುನಿಕ ಜೀವನ ಶೈಲಿಯಿಂದ ಬದಲಾದ ಪರಿಸರ:-

ಕುವೆಂಪು ಸಾಹಿತ್ಯದಲ್ಲಿ ಕಂಡು ಬರುವ ಮಲೆನಾಡಿನ ಪರಿಸರ ದಶಕಗಳಲ್ಲಿನ ಮಲೆನಾಡಿನ ಚಿತ್ರಣ ಮೂಡಿಸುತ್ತದೆ. ಕುವೆಂಪು ಕಂಡಿದ್ದ ಹಾಗು ಒಡನಾಡಿದ್ದ ಸಹ್ಯಾದ್ರಿಯ ತಪ್ಪಲಿನೊ ಈಗೀನ ಮಲೆನಾಡಿನ ಪರಿಸರಕ್ಕೂ ಹೋಲಿಸಿದರೆ ಹೆಚ್ಚಿನ ವ್ಯತ್ಯಾಸ ಕಂಡು ಬರುತ್ತದೆ.

ಪ್ರಕೃತಿಯ ಎಲ್ಲಾ ಅಂಶಗಳಲ್ಲೂ ಉಂಟಾದ ಬದಲಾವಣೆಗಳು ಕಣ್ಣಿಗೆ ಗೋಚರಿಸುತ್ತವೆ. ಕಾರಣ ಬದಲಾದ ಮಾನವರೆ ಜೀವನ ಶೈಲಿ, ಮಾನವನ ತೀರದ ಅಗತ್ಯಗಳಿಗಾಗಿ, ಪ್ರಕೃತಿಯ ಮೇಲಿನ ನಿರಂತರ ಶೋಷಣೆಯಿಂದಾಗಿ ಪರಿಸರದಲ್ಲಿ ಇಂದು ಅನೇಕ ಏರುಪೇರುಂಟಾಗಿದೆ. ನಾಗರೀಕ ಮಾನವ ಸಮೂಹ, ಇಂದು ಬದಲದ ಜೀವನ ವಿಧಾನದಿಂದಾಗಿ, ಆಧುನಿಕತೆಯತ್ತಾ ದಾಪುಗಾಲು ಹಾಕುತ್ತಾ, ಹಿಂದೆ ತನ್ನ ಆಹಾರ ಸಂಪಾದನೆಯ ಮೂಲವಾಗಿದ್ದ ಪ್ರಕೃತಿಯನ್ನಷ್ಟೇ ಅಲ್ಲದೇ ಕೃಷಿಯನ್ನು ಇಂದು ಆರ್ಥಿಕ ಲಾಭ ಮಾಡಿಕೊಳ್ಳುವ ಮಾರ್ಗಗಳನ್ನಾಗಿಸಿಕೊಂಡಿದ್ದಾನೆ. ಹಿಂದೆಲ್ಲಾ ತನ್ನ ಆಹಾರ ಸಂಪಾದನೆಗಾಗಿ, ಇಲ್ಲವೇ ಕೇವಲ ಮೂಲಭೂತ ಅಗತ್ಯಕಷ್ಟೇ ಪರಿಸರದ ಮೇಲೆ ಅವಲಂಬಿತನಾಗಿದ್ದ ಮಾನವ ಇಂದು ಪ್ರಕೃತಿಯಲ್ಲಿ ದೊರಕುವ ಮೂಲ ವಸ್ತುಗಳಿಂದಾಗುವ ಲಾಭದಿಂದಾಗಿ ತೀರಾ ಲೋಬಿಯಾಗಿದ್ದಾನೆ.

ಪ್ರಕೃತಿಯಲ್ಲಿ ಒಂದು ಅಂಗವಾದ ಮಾನವ ತನ್ನ ಬುದ್ದಿಶಕ್ತಿ ಇಂದ ಇತರ ಜೀವಗಳ ಮೇಲೆ ಹಿಡಿತ ಸಾಧಿಸುತ್ತಾ, ಸರ್ವಾಧಿಕಾರಿಯಂತೆ ವರ್ತಿಸುತ್ತಾ, ಪರಿಸರವನ್ನು ತನಗೆ ಬೇಕಾದಂತೆಲ್ಲಾ ಬಳಸಿಕೊಳ್ಳುತ್ತಾ ಹಾಳುಗೆಡವ ಹತ್ತಿದ್ದಾನೆ.

ನಾಗರಿಕ ಜಗತ್ತು ಮಲೆನಾಡನ್ನು ಪ್ರವೇಶಿಸಿದಂತೆಲ್ಲಾ ಇಲ್ಲಿನ ಜನರ ಜೀವನ ವಿಧಾನದಲ್ಲಿ ಹಾಗು ಬದುಕಿನ ಎಲ್ಲಾ ಅಂಶಗಳಲ್ಲೂ ಗಣನೀಯ ಬದಲಾವಣೆಯುಂಟಾಗ ತೊಡಗಿತು. ಪರಿಣಾಮ ಇತರೆ ಎಲ್ಲಾ ಜೀವಿ ಪ್ರಭೇದಗಳ ಮೇಲೆ ಬೀರತೊಡಗಿತು.

ಆಧುನಿಕತೆಯ ಸೋಗಿನಲ್ಲಿ ಕೊಳ್ಳುಬಾಕ ಸಂಸ್ಕೃತಿ, ಆರಾಮದಾಯಕ ಮತ್ತು ವಿಲಾಸಮಯ ಜೀವನಕ್ಕೆ ಮಾರುಹೋದ ಮಾನವ ತನ್ನ ವಿವೇಕಹೀನ ವರ್ತನೆಯಿಂದ ಇಂದು ಬಗೆಹರಿಸಲಾರದ ಸಮಸ್ಯೆಗಳ ಸರಮಾಲೆಯನ್ನೇ ಹುಟ್ಟು ಹಾಕಿದ್ದಾನೆ.

ಕುವೆಂಪು ಕಂಡಿದ್ದ ಮಲೆನಾಡಿನಲ್ಲಿ ನೆಡೆದಾಡಲು ಸರಿಯಾದ ರಸ್ತೆಗಳೂ ಇರಲಿಲ್ಲ. ಕಂದರಗಳಸ್ನು ಇಳಿದು ಗುಡ್ಡಗಳನ್ನು ಹತ್ತಿ, ಕಾಡಿನ ನಡುವಿನ ಕಾಲುದಾರಿಯಲ್ಲಿ ನೆಡೆದು ಒಂದೆಡೆಯಿಂದ

ಮತ್ತೊಂದೆಡೆಗೆ ಪ್ರಯಾಣಿಸುತ್ತಿದ್ದರು. ಅನುಕೂಲವಿದ್ದ ಕೆಲವರು ಮಾತ್ರ ಎತ್ತಿನಗಾಡಿಗಳಲ್ಲಿ ಪ್ರಯಾಣ ಮಾಡುತ್ತಿದ್ದರು. ಮಳೆಗಾಲದಲ್ಲಿ ಮಲೆನಾಡಿನ ಜನ ಒಂದು ಪ್ರದೇಶದಿಂದ ಮತ್ತೊಂದೆಡೆಗೆ ಪ್ರಯಾಣ ಮಾಡಲು ನದಿಯನ್ನೊ, ಹಳ್ಳಗಳನ್ನು, ಈಜಿಕೊಂಡೊ ಇಲ್ಲವೇ ದೋಣಿಗಳಲ್ಲಿಯೋ ಒಂದೆಡೆಯಿಂದ ಮತ್ತೊಂದೆಡೆಗೆ ಹೋಗುತ್ತಿದ್ದರು. ಆಗ ಮಲೆನಾಡು ಸಹಜ ಸ್ಥಿತಿಯಲ್ಲಿತ್ತು.

ಇಲ್ಲಿ ಸಾರಿಗೆ ವ್ಯವಸ್ಥೆ ಆರಂಭವಾಗುವ ಮೊದಲು ಇದ್ದ ದಟ್ಟ ಆರಣ್ಯ ಇಂದು ಬಹುತೇಕ ನಾಶಹೊಂದಿದೆ. ಸಾರಿಗೆ ಸಂಪರ್ಕ ಬಂದ ಮೇಲಂತೂ ಸಹ್ಯಾದ್ರಿಯ ಅರಣ್ಯ ತನ್ನ ಶ್ರೀಮಂತ ಜೈವಿಕ ವೈವಿಧ್ಯತೆಯನ್ನು ಬೃಹತ್ ಪ್ರಮಾಣದಲ್ಲಿ ಕಳೆದುಕೊಂಡಿತು. ರಸ್ತೆ ನಿರ್ಮಾಣದ ಸಲುವಾಗಿ ಬೃಹತ್
ಮರಗಳನ್ನು, ಅಮೂಲ್ಯ ಗಿಡಮೂಲಿಕೆ ಸಸ್ಯಗಳನ್ನು ಕಡಿದು ನಾಶಪಡಿಸಲಾಯಿತು.

ಸಾರಿಗೆ ವ್ಯವಸ್ಥೆಯಿಂದಾಗಿ ವಿವಿಧ ಕಾರ್ಖಾನೆಗಳಿಗೆ ಮರಗಿಡ ಮತ್ತು ಬಿದಿರಿನ ಸಾಗಾಣಿಕೆ ಅತ್ಯಂತ ಸುಲಭ ಸಾಧ್ಯವಾಯಿತು. ಮರಗಿಡಗಳನ್ನು ಮತ್ತು ಬಿದಿರನ್ನು ಅಧಿಕ ಪ್ರಮಾಣದಲ್ಲಿ ಕಡಿದು ಲಾರಿಗಳಲ್ಲಿ ಕಾರ್ಖಾನೆಗಳಿಗೆ ಸಾಗಿಸಲಾಗುತ್ತಿದೆ.

ಸುಗಮ ಸಾರಿಗೆ ಸಂಪರ್ಕ ವ್ಯವಸ್ಥೆ ಮರಗಳ್ಳರಿಗೂ ಅಕ್ರಮ ಮರ ಸಾಗಾಣಿಕೆದಾರರಿಗೂ ಮಲೆನಾಡಿಗೆ ಭವ್ಯ ಸ್ವಾಗತವನ್ನೇ ನೀಡಿತು. ಇದರಿಂದಾಗಿ ಸಹ್ಯಾದ್ರಿ ದಟ್ಟ ಮಲೆಗಳಲ್ಲಿ ಹೇರಳವಾಗಿದ್ದ ಸಸ್ಯ ಹಾಗು ವನ್ಯ ಜೀವಿ ಪ್ರಪಂಚದ ವಿನಾಶವೂ ಆರಂಭವಾಯಿತು.

ಆಧುನಿಕ ನಾಗರೀಕ ಮಾನವ ನೆಡೆದಾಡಿದಂತೆಲ್ಲ ತನ್ನ ಹೆಜ್ಜೆ ಗುರುತುಗಳಲ್ಲಿ ಬಂಜರನ್ನು ಸೃಷ್ಟಿಸುತ್ತಿದ್ದಾನೆ ಎನ್ನುವುದು ಇತಿಹಾಸ ತಜ್ಞನೊಬ್ಬನ ಅಭಿಪ್ರಾಯ. ಅದರಂತೆಯೇ ನಾಗರೀಕ ಮಾನವನ ನಾಗರೀಕತೆ ಮತ್ತು ಅಭಿವೃದ್ಧಿಯ ಸೋಗಿನಲ್ಲಿ ಪರಿಸರ ವಿನಾಶಕ್ಕೆ ನಾಂದಿ ಹಾಡಿದ್ದಾನೆ. ಮಲೆನಾಡಿನಲ್ಲಿ ರಾಷ್ಟ್ರೀಯ ಹೆದ್ದಾರಿ ಆರಂಭವಾದದ್ದು ಸಹ ಅಸಂಖ್ಯಾತ ಸಸ್ಯಗಳ, ಪ್ರಾಣಿಗಳ ನಿರ್ನಾಮಕ್ಕೆ ಮೂಲವಾಯಿತು.

ದಕ್ಷಿಣ ಭಾರತಕ್ಕೆ ರೈಲ್ವೆ ಮಾರ್ಗ ಮತ್ತು ಕೊಂಕಣ ರೈಲ್ವೆ ಆರಂಭವಾದಾಗ ಪಶ್ಚಿಮ ಘಟ್ಟಗಳಲ್ಲಿನ ಕಾಡುಗಳಲ್ಲಿ ಹೇರಳವಾಗಿ ಬೆಳೆಯುತ್ತಿದ್ದ ಧೂಮ, ಧೂಪ ಮರಗಳನ್ನು ಅವುಗಳಿಂದ ದೊರೆಯುವ ಗಟ್ಟಿ ಹಲಗೆಗಾಗಿ ಅತ್ಯಾಧಿಕ ಪ್ರಮಾಣದಲ್ಲಿ ನೆಲಸಮ ಮಾಡಲಾಯಿತು.

ಆಗುಂಬೆಯ ಕಾಡುಗಳಲ್ಲಿ (ಪಶ್ಚಿಮ ಘಟ್ಟದ ಕಾಡುಗಳಲ್ಲಿ) ಕಂಡು ಬರುವ ಧೂಮದ ಮರ ಸುಮಾರು 120 ರಿಂದ 130 ಅಡಿ ಎತ್ತರವಿರುತ್ತದೆ. ಮರ್ರದ ಸುತ್ತಳತೆ 12 ರಿಂದ 15

ಅಡಿಗಳಷ್ಟಿರುತ್ತದೆ. ತುದಿಯಲ್ಲಿ ದಟ್ಟವಾಗಿ ಎಲೆಗಳನ್ನು ಹೊಂದಿ ವಿಸ್ತಾರವಾಗಿ ಹರಡಿಕೊಂಡು ಬೆಳೆಯುವ ಈ ಮರ ಎರಡು ಒಳಜಾತಿಗಳನ್ನೊಳಗೊಂಡಿದೆ. ಅನೇಕ ಪ್ರಾಣಿ ಪಕ್ಷಿಗಳಿಗೆ ಆಶ್ರಯವನ್ನೀಯುತ್ತದೆ. ಇಷ್ಟೇ ಅಲ್ಲದೇ ಆ ಪ್ರಾಣಿ ಪಕ್ಷಿ ಸಂಕುಲಕ್ಕೆ ಧೂಮದ ಹೂವು, ಕಾಯಿ, ಹಣ್ಣುಗಳೇ ಆಹಾರ. ಕೆಲವೊಂದು ಜೀವಿ ಪ್ರಭೇದಗಳಂತೂ ಈ ಮರದ ಮೇಲೆಯೇ ಹುಟ್ಟಿ, ಅಲ್ಲೇ ಬೆಳೆದು, ಅಲ್ಲಿಯೇ ಸಂತಾನಾಭಿವೃದ್ಧಿನ್ನು ನಡೆಸಿ, ಆ ಮರದ ಮೇಲಯೇ ತನ್ನ ಇಡೀ ಜೀವಮಾನವನ್ನೇಲ್ಲಾ ಕಳೆಯುತ್ತದೆ. ಇಲ್ಲಿ ಧೂಮದ ಮರ ಆ ಪ್ರಾಣಿ ಪಕ್ಷಿಗಳಿಗೆ ಕೇವಲ ಒಂದು ಆವಾಸವಾಗಿರದೇ ಇಡೀ ಪರಿಸರ ವ್ಯವಸ್ಥೆಯೇ ಆಗಿದೆ. ಆ ಮರವೇ ಅಲ್ಲಿ ಬದುಕು ಸಾಗಿಸುವ ಜೀವಿ ಸಂಕುಲದ ಇಡೀ ಪ್ರಪಂಚ. ಹೀಗಿದ್ದಾಗ ಆ ಮರಗಳನ್ನು ಕಡಿಯುವುದರಿಂದ, ಆ ಮರದೊಂದಿಗೆ ಅದನ್ನಾಶ್ರಯಿಸಿದ್ದ ಪ್ರಾಣಿ, ಪಕ್ಷಿಸಂಕುಲ ಅಳಿದು ಹೋಗುತ್ತವೆ.

ರೈಲ್ವೆ ಹಳಿಗಳಿಗೆ ಕೆಳಗೆ ಅಡ್ಡಡ್ಡವಾಗಿ ಹಾಸಲು ಧೂಮದ ಮರದ ಹಲಗೆಗಳನ್ನು ಬಳಸುತ್ತಾರೆ. ಏಕೆಂದರೆ ಈ ಮರದ ಹಲಗೆಗಳು ಅತ್ಯಂತ ಗಟ್ಟಿಯಾಗಿದ್ದು, ಹೆಚ್ಚಿನ ಭಾರವನ್ನು ಕಂಪನವನ್ನು ತಡೆದುಕೊಳ್ಳುವ ಶಕ್ತಿ ಹೊಂದಿವೆ.

ಮಣ್ಣಿನಲ್ಲಿ ಹೆಚ್ಚು ಸಮಯ ಇದ್ದರೂ ಸಹ ಅಷ್ಟು ಸುಲಭವಾಗಿ ಈ ಮರ ಕೊಳೆಯದು. ಇದಕ್ಕೆ ಗೆದ್ದಲೂ ಹಿಡಿಯುವುದಿಲ್ಲ. ಧೂಮದ ಮರದಿಂದ ಸುವಾಸನೆ ಎಣ್ಣೆಯನ್ನು ಸಹ ತಯಾರಿಸಲಾಗುತ್ತದೆ. ಮರದ ಅಂಟನ್ನು ಕೊರೆದು ಅದರಿಂದ ಬರುವ ಅಂಟನ್ನು ಶೇಖರಿಸುತ್ತಾರೆ.

ರೈಲ್ವೆ ಮಾರ್ಗಕ್ಕೆ ಗಟ್ಟಿ ಹಲಗೆಗಳನ್ನು ಅಳವಡಿಸುವ ಸಲುವಾಗಿ ಧೂಮದ ಮರಗಳನ್ನು ಇಲ್ಲಿ ನೆಲಸಮ ಮಾಡಲಾಯಿತು. ಇದರಿಂದಾದ ಜೈವಿಕ ವೈವಿಧ್ಯತೆಯ ನಾಶ ಬಹುಶ: ಊಹಿಸಲೂ ಸಹ ಅಸಾಧ್ಯ. ಧೂಮದ ಕಾಯಿಗಳನ್ನು ತಿಂದು ಬದುಕುತ್ತಿದ್ದ ಮಂಗಟೆ ಹಕ್ಕಿಯು ಇಂದು ವಿನಾಶದ ಅಂಚಿನಲ್ಲಿದೆ (horn bill).

ಧೂಮದ ಕಾಯಿಗಳನ್ನು ಈ ಹಕ್ಕಿ ತಿಂದು ಹಿಕ್ಕೆ ಹಾಕಿದ ನಂತರವಷ್ಟೇ ಆ ಮರದ ಬೀಜ ಪ್ರಸಾರ ಸಾಧ್ಯವಾಗುತ್ತಿತ್ತು. ಆದರೆ ಈ ಮರಗಳನ್ನು ಕಡಿದ ಪರಿಣಾಮವಾಗಿ ಈ ಪಕ್ಷಿಗಳಿಗೆ ಆಹಾರ ದೊರಕದೆ ಅವುಗಳ ಸಂಖ್ಯೆಯೂ ಇಂದು ಗಣನೀಯವಾಗಿ ಕ್ಷೀಣಿಸತೊಡಗಿದೆ. ಮಂಗಟೆ ಹಕ್ಕಿಗಳ ಸಂಖ್ಯೆ ಕ್ಷೀಣಿಸಿದ ಪರಿಣಾಮ ಇಂದು ಆ ಮರದ ಬೀಜ ಪ್ರಸಾರವಾಗದೇ, ಆಗುಂಬೆಯ ಕಾಡುಗಳಲ್ಲಿ ಈ ಮರಗಳ ಸಂಖ್ಯೆಯೂ ಇಂದು ಇಳಿಮುಖವಾಗತೊಡಗಿದೆ. `ಧೂಮ` ದ ಕುರಿತು ಮಾಹಿತಿ ಬಿ.ಜಿ.ಎಲ್.ಸ್ವಾಮಿಯವರ ``ಹಸುರು ಹೊನ್ನು`` ವಿನಲ್ಲಿ ಸಂಕ್ಷಿಪ್ತವಾಗಿ ನೀಡಿದ್ದಾರೆ. ಇಲ್ಲಿ ಅತೀ ಮುಖ್ಯವಾಗಿ ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ, ನೈಸರ್ಗಿಕ ಅಸಮತೋಲನ.

ಪರಿಸರದಲ್ಲಿನ ವ್ಯವಸ್ಥೆಯು ಜೀವ ಮಂಡಲದ ಒಂದು ಕಾಯಕ ಘಟಕವಿದ್ದಂತೆ. ಇಲ್ಲಿ ಜೀವಿಗಳ ಸಮುದಾಯ ಮತ್ತು ಅಜೈವಿಕ ಅಂಶಗಳ ನಡುವೆ ಮತ್ತು ಜೀವಿ ಜೀವಿಗಳ ನಡುವೆ, ಅಂದರೆ ಸಸ್ಯಗಳು, ಪ್ರಾಣಿಗಳು ಮತ್ತು ಸೂಕ್ಷ್ಮಜೀವಿಗಳು ಮೊದಲಾದ ಜೀವರಾಶಿಗಳ ನಡುವೆ ಒಂದು ಅವಿನಾಭಾವ ಸಂಬಂಧ ನಿರ್ಮಾಣವಾಗಿರುತ್ತದೆ. ಕಾಡು, ಬೆಟ್ಟ, ಗುಡ್ಡ, ಕೆರೆ, ನದಿ, ಸಾಗರ, ಇತ್ಯಾದಿ ಪರಿಸರ ವ್ಯವಸ್ಥೆಗಳ ನಿರ್ದಿಷ್ಟ ಸ್ಥಳಗಳಲ್ಲಿ ವಾಸಿಸುವ ಜೀವಿಗೆ ತನ್ನದೇ ಆದ ಜೀವನ ಪರಿಪಾಟವಿರುತ್ತದೆ. ಒಂದು ಜೀವಿ ಮತ್ತೊಂದರ ಮೇಲೆ ತನ್ನ ಅವಶ್ಯಕತೆಗಾಗಿ ಅವಲಂಬಿತವಾಗಿ ರುತ್ತದೆ. ಇದರಿಂದಾಗಿ ಪ್ರಕೃತಿಯಲ್ಲಿ ಜೈವಿಕ ಅಸಮತೋಲನ ಏರ್ಪಟ್ಟಿರುತ್ತದೆ. ಇಲ್ಲಿ ಒಂದು ಜೀವಿಯ ಜೀವನ ಶೈಲಿಗೆ ಏರುಪೇರಾದರೆ, ಅದನ್ನು ಅವಲಂಬಿಸಿರುವ ಮತ್ತೊಂದು ಜೀವಿಗೆ ಅದರ ತಾಪ ಖಂಡಿತ ತಾಗುತ್ತದೆಯಾದ್ದರಿಂದ ಪ್ರಕೃತಿಯಲ್ಲಿನ ಜೈವಿಕ ಸಮತೋಲನ ತಪ್ಪುತ್ತದೆ.

ಬೃಹತ್ ವಿದ್ಯುತ್ ಯೋಜನೆಗಳಿಂದಾಗಿ ಸಹ್ಯಾದ್ರಿ ತಪ್ಪಲಿನ ಕಾಡು ಮುಳುಗಡೆಗೊಂಡು, ಸಸ್ಯ ಹಾಗು ಪ್ರಾಣಿ ಪ್ರಭೇದಗಳನ್ನೊಳಗೊಂಡಂತೆ ಜೈವಿಕ ವೈವಿಧ್ಯತೆ ವರಾಹಿ ಹಿನ್ನೀರಿನಲ್ಲಿ ಜಲ ಸಮಾಧಿ ಗೊಂಡಿತು. ಜಲ ವಿದ್ಯುತ್ ಸ್ಥಾವರಕ್ಕಾಗಿ ಮಲೆನಾಡಿನ ಬಹುಪಾಲು ಅರಣ್ಯ ಈ ಅಭಿವೃದ್ಧಿ ಯೋಜನೆಯಿಂದ ದೊರೆಯುವ ಅತ್ಯಲ್ಪ ಪ್ರಮಾಣದ ವಿದ್ಯುತ್ ಉತ್ಪಾದನೆಗಾಗಿ ನಾಶವಾದದ್ದು ಅತ್ಯಂತ ದುಸ್ಥರ.

``ನಿಸರ್ಗದ ಸಂಪನ್ಮೂಲಗಳನ್ನು ವೈಜ್ಞಾನಿಕ ಮತ್ತು ತಾಂತ್ರಿಕ ವಿಧಾನಗಳ ಮೂಲಕ ಸರಕುಗಳನ್ನಾಗಿ ಪರಿವರ್ತಿಸಿ ನಮ್ಮ ಅಗತ್ಯಗಳನ್ನು ಪೂರೈಸಿ ಕೊಳ್ಳುವುದು ಅಭಿವೃದ್ಧಿ ಆಗುತ್ತದೆಯೇ ಹೊರತು ನಿಸರ್ಗವನ್ನು ಘಾಸಿಗೊಳಿಸುವುದು ಅಥವಾ ಶಾಶ್ವತವಾಗಿ ಊನ ಮಾಡುವುದಿಲ್ಲ ಎಂದು ಡಾ! ಜಿ.ಎನ್.ಮಲ್ಲಿಕಾರ್ಜುನಪ್ಪನವರು ತಮ್ಮ ಭೋಧಿವೃಕ್ಷದ ಕೆಳಗೆ ಎಂಬ ಪುಸ್ತಕದಲ್ಲಿ ಪರಿಸರ ಕಾಳಜಿ ಅಭಿವ್ಯಕ್ತ ಪಡಿಸಿದ್ದಾರೆ``.

ಇಂತಹ ಯೋಜನೆಗಳನ್ನು ಅನುಷ್ಟಾನಕ್ಕೆ ತರುವ ಮೊದಲು ಅವುಗಳ ಅನಿವಾರ್ಯತೆ, ಅದರಿಂದಾಗುವ ಲಾಭ ಮತ್ತು ನಷ್ಟಗಳ ಅಧ್ಯಯನ ಅಗತ್ಯವೆನ್ನಿಸದಿರದು. ಏಕೆಂದರೆ ಅಭಿವೃದ್ಧಿ ಯೋಜನೆಗಳು ಕೆಲವೊಮ್ಮೆ ಸ್ಥಳೀಯರಿಗೆ ಒದಗಿಸುವ ಸೌಲಭ್ಯಗಳಿಗಿಂತ ತೊಂದರೆಯೇ ಹೆಚ್ಚಾಗುತ್ತದೆ.

ಅನೇಕ ಜಲಾಶಯಗಳ ಹಿನ್ನೀರಿನಲ್ಲಿ ಇಂದು ದಟ್ಟ ಅರಣ್ಯದ ಪಳಿಯುಳಿಕೆಯಂತೆ ಗೋಚರಿಸುವ ಬೋಳು ಮರಗಳು ಅಭಿವೃದ್ಧಿ ಯೋಜನೆ ಮತ್ತು ಆಧುನಿಕತೆಯಿಂದಾಗಿ ನಾಶಹೊಂದಿದ ನೈಸರ್ಗಿಕ ಸಂಪತ್ತಿಗೆ ಮುಖ್ಯ ಸಾಕ್ಷಿಯಾಗಿದೆ. ಶಿವಮೊಗ್ಗೆಯಿಂದ ಸುಮಾರು ಏಳು ಮೈಲಿ ದೂರದಲ್ಲಿದ್ದ ಏಳು ಸೀಳು ಎಂಬ ನಿಸರ್ಗ ನಿರ್ಮಿತ ಸುಂದರ ನೀರಿನ ಮೂಲವು ಸಹ ನೀರಿನಲ್ಲಿ ಸಂಪೂರ್ಣವಾಗಿ ಮುಳುಗಡೆಗೊಂಡಿದೆ.

ಭದ್ರಾ ನದಿಗೆ ಲಕ್ಕವಳ್ಳಿಯ ಬಳಿ ಭದ್ರಾ ರಿಸರ್ವೈರ್ ಪ್ರಾಜೆಕ್ಟ್ (BPR) ಆರಂಭಿಸುವ ಮೊದಲು ಇದ್ದ ದಟ್ಟ ಕಾಡು ಈ ನದಿಗೆ ಅಣೆಕಟ್ಟು ಕಟ್ಟಿದಾಗ ಭದ್ರಾ ಹಿನ್ನೀರಿನಲ್ಲಿ ಮುಳುಗಡೆಗೊಂಡಿದೆ. ಹೀಗೆ ಮುಳುಗಡೆ ಹೊಂದಿ ನಾಶವಾದ ಅರಣ್ಯ ಪ್ರದೇಶ ಬಹಳ ವಿಸ್ತಾರವಾಗಿದೆ. ಆಗ ನಾಶಗೊಂಡ ಮರಗಳ ಸಂಖ್ಯೆ ಅಂದಾಜಾದರೆ ಇದರೊಂದಿಗೆ ಹೇಳ ಹೆಸರಿಲ್ಲದೆ ನಿರ್ನಾಮವಾಗಿ ಪ್ರಾಣಿ ಹಾಗು ಪಕ್ಷಿ ಸಂಕುಲದ ಸಂಖ್ಯೆಯ ಅಂದಾಜು ಮಾಡಲು ಖಂಡಿತಾ ಸಾಧ್ಯವಿಲ್ಲ. ಇದರಿಂದಾಗಿ ಮಲೆನಾಡಿನಲ್ಲಿ ನಾಶವಾದ ಪ್ರಾಕೃತಿಕ ಸಂಪತ್ತಿನ ಜೀವಿ ಪರಿಸರ ಮೌಲ್ಯ (Ecological value) ಅಗಣನೀಯ. ಏಕೆಂದರೆ ಮಣ್ಣು, ಮಣ್ಣಿನಲ್ಲಿರುವ ಶೀಲೀಂದ್ರಗಳಿಂದಾ ಹಿಡಿದು ಚಿಕ್ಕ ಪುಟ್ಟ ಸಸ್ಯಗಳನ್ನು ಒಳಗೊಂಡಂತೆ, ಅನೇಕ ಔಷಧಿಯ ಗುಣವುಳ್ಳ ಸಸ್ಯಗಳು, ದೊಡ್ಡ ಮರಗಳು ಅದರಿಂದ ಪ್ರಕೃತಿಗೆ ಒದಗುತ್ತಿದ್ದ ಲಾಭ, ಇತರೆ ಪ್ರಾಣಿ ಪಕ್ಷಿಗಳಿಗೆ ಅವುಗಳಿಂದ ದೊರಕುತ್ತಿದ್ದ ಆಹಾರ ಹಾಗೂ ಆಶ್ರಯತಾಣದ ನಾಶ. ಹೀಗೆ ಸಾಮೂಹಿಕವಾಗಿ ಆದ ನಷ್ಟದ ಪ್ರಮಾಣ ಊಹಿಸಲು ಅಸಾಧ್ಯ.

ಭದ್ರಾವತಿ ಪಟ್ಟಣದಲ್ಲಿ ಮೈಸೂರು ಪೇಪರ್ ಮಿಲ್ (M.P.M) ಆರಂಭವಾದಾಗ ಅಧಿಕಾರಿಗಳ ಕಣ್ಣಿಗೆ ಗೋಚರಿಸಿದ್ದು ಮಲೆನಾಡಿನ ಅಪಾರ ಸಸ್ಯರಾಶಿ. ಸ್ವಾತಂತ್ರ್ಯೋತ್ತರದಿಂದ ಸುಮಾರು ಐವತ್ತಕ್ಕೂ ಹೆಚ್ಚು ವರ್ಷಗಳ ಕಾಲ ಸತತವಾಗಿ ಈ ಕಾರ್ಖಾನೆಗೆ ಬಿದಿರು ಮರ ಮುಟ್ಟು ಇತ್ಯಾದಿ ಮೂಲ ವಸ್ತುಗಳನ್ನು ಕಾಗದ ತಯಾರಿಕೆಗಾಗಿ ಮಲೆನಾಡಿನ ಕಾಡುಗಳಿಂದಲೇ ಒದಗಿಸಲಾಯಿತು

ಬಿದಿರು ಮತ್ತು ಮರಗಳನ್ನು ಸಾಗಿಸುವ ಸಲುವಾಗಿ ರಸ್ತೆಯನ್ನು ಮಲೆನಾಡಿನಾದ್ಯಂತ ನಿರ್ಮಿಸಿದಾಗ ಸಸ್ಯ ಸಂಪತ್ತು ಕಳೆದುಕೊಂಡು ಬಡವಾಯಿತು. ಇಷ್ಟೇ ಅಲ್ಲದೆ ಪ್ಲೇವುಡ್ ಕಾರ್ಖಾನೆಗಾಗಿ ಅಗತ್ಯ ಮೂಲ ವಸ್ತುಗಳನ್ನು ಸಹ ಸಹ್ಯಾದ್ರಿಯ ಕಾಡುಗಳಿಂದಲೇ ಮರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಸಾಗಿಸಲಾಯಿತು. ಪರಿಣಾಮ ಈ ಸಹ್ಯಾದ್ರಿಯಲ್ಲಿನ ಅಪೂರ್ಣ ಅನನ್ಯ ಜೀವರಾಶಿ, ತಮ್ಮ ನೈಸರ್ಗಿಕ ನೆಲೆಯನ್ನು ಕಳೆದುಕೊಂಡಿದ್ದರಿಂದ ಅನೇಕಾನೇಕ ಪ್ರಭೇದಗಳು ಇಂದು ಬೆರಳೆಣಿಕೆಯಲ್ಲಿದ್ದರೆ, ಇನ್ನೂ ಕೆಲವಂತೂ ಅಳಿವಿನಂಚಿಗೆ ಸರಿದುಬಿಟ್ಟಿವೆ.

ಗಣಿಗಾರಿಕೆಯಿಂದಾಗಿ ಪ್ರಕೃತಿಯ ಮೇಲೆ ನಿರಂತರ ಶೋಷಣೆಯಾಗುತ್ತಿದೆ. ಭೂಮಿಯಲ್ಲಿ ದೊರಕುವ ಅನೇಕ ಲೋಹಗಳಿಗಾಗಿ, ಇತರೆ ಮೂಲವಸ್ತುಗಳಿಗಾಗಿ ಭೂಗರ್ಭಕ್ಕೆ ಲಗ್ಗೆ ಇಟ್ಟಿರುವ ಮಾನವ ಸಮೂಹ ಇದರಿಂದ ಆಗುವ ಲಾಭವನ್ನು ಮಾತ್ರ ಅಂದಾಜು ಮಾಡಿತ್ತೇ ಹೊರತು ನಷ್ಟವನ್ನಲ್ಲ.

``ಕುದುರೆಮುಖದಲ್ಲಿ ಕಬ್ಬಿಣದ ಗಣಿಗಾರಿಕೆಯಿಂದಾಗಿ ಮಲೆನಾಡು ತೀವ್ರ ಹಾನಿಗೊಳಗಾಗಿದೆ. ಕಬ್ಬಿಣದ ಅದಿರನ್ನು (Hematite) ಭೂಗರ್ಭದೊಳಗಿನಿಂದ ತೆಗೆದು ಭೂತಾಯಿಯ ಒಡಲನ್ನು ಬಗೆದು ದೋಚುತ್ತಿದ್ದಾರೆ. ಮತ್ತೊಂದೆಡೆ ಮಳೆ ನೀರಿನಿಂದಾಗಿ ಸೇರಿಕೊಳ್ಳುವ

ಮಣ್ಣಿನಲ್ಲಿರುವ ಕಬ್ಬಿಣದ ಅಂಶ ಮಳೆಯ ನೀರಿನೊಂದಿಗೆ ಹರಿದು ಹಳ್ಳ ಸೇರಿ, ಅಲ್ಲಿಂದ ಹರಿದು ನದಿ ನೀರನ್ನು ಸೇರಿದ ಫಲವಾಗಿ ಇಂದು ತುಂಗಭದ್ರಾ ನದಿ ಕಲುಷಿತಗೊಂಡಿದ್ದು, ಅದರಲ್ಲಿನ ಜಲಚರಗಳು ಅಪಾಯಕ್ಕೀಡಾಗಿವೆ.

ನದಿ ನೀರಿನಲ್ಲಿ ಮಿತಿ ಮೀರಿದ ಕಬ್ಬಿಣದ ಪ್ರಮಾಣದಿಂದಾಗಿ, ನದಿಯಲ್ಲಿನ ಮೀನು, ಏಡಿ, ಮೃದ್ವಂಗಿಗಳು, ಇತ್ಯಾದಿ ಜೀವಿಗಳಿಗೆ ಮಾರಣಾಂತಿಕವಾಗಿ ಪರಿಣಮಿಸಿದೆ. ಇತ್ತೀಚೆಗೆ ತುಂಗಭದ್ರ ನದಿಯಲ್ಲಿ ಮೀನುಗಳು ಸಾವಿರಗಟ್ಟಲೇ ಸತ್ತು, ನೀರಿನ ಮೇಲೆ ತೇಲುತ್ತಿದ್ದ ದೃಶ್ಯ ಕಂಡು ಬಂದಿದ್ದು, ಅನೇಕ ಪತ್ರಿಕೆ ಹಾಗು ಮಾಧ್ಯಮಗಳಲ್ಲೂ ಈ ಬಗ್ಗೆ ವರದಿಯಾಗಿತ್ತು. ಜಲ ಮಾಲಿನ್ಯದಿಂದಾಗಿ ಮೀನುಗಳ ಸಾಮೂಹಿಕ ಮಾರಣ ಹೋಮದಿಂದಾಗಿ ಮೀನುಗಳ ಸಂಖ್ಯೆ ನೈಸರ್ಗಿಕ ಜಲ ಮೂಲಗಳಲ್ಲಿ ಕ್ಷೀಣಗೊಂಡು ಮತ್ಸ್ಯಕ್ಷಾಮ ತಲೆದೋರದೇ ಇರದು. ಈ ಮೀನುಗಳನ್ನು ಭಕ್ಷಿಸುವ ಹಕ್ಕಿ ಪಕ್ಷಿ ಮತ್ತು ಇತರ ಜೀವಿಗಳಿಗೂ ಇದರಿಂದ ಹಾನಿ ತಪ್ಪಿದ್ದಲ್ಲ. ನೈಸರ್ಗಿಕ ಆಹಾರ ಸರಪಳಿಯೊಳಗೆ ಪ್ರವೇಶಿಸುವ ಈ ಆಜೈವಿಕ ವಸ್ತುಗಳು ಅನೇಕ ದುಷ್ಪರಿಣಾಗಳಿಗೆಡೆ ಮಾಡಿಕೊಟ್ಟಿವೆ.

ಕಬ್ಬಿಣದ ಅಂಶ ಹೆಚ್ಚಾಗಿರುವ ನೀರನ್ನು ಕುಡಿಯುವುದರಿಂದ, ಮತ್ತು ಬಳಸುವುದರಿಂದ ಮನುಷ್ಯರಲ್ಲೂ ಅನೇಕ ಕಾಯಿಲೆಗಳು ತೊಂದರೆಗಳು ಕಾಣಿಸಿಕೊಂಡಿವೆ.

ಪರಿಸರ ಮತ್ತು ಅರಣ್ಯ ಸಚಿವಾಲಯಗಳು ದೇಶದಾದ್ಯಂತ ಅಂರ್ತಜಲ ಮತ್ತು ಮೇಲ್ಮೈ ನೀರು ಉಪಯೋಗಿಸಲು ಯೋಗ್ಯವಲ್ಲದ ರೀತಿಯಲ್ಲಿ ಮಲೀನವಾಗಿರುವ 22 ಸ್ಥಳಗಳನ್ನು ಗುರುತಿಸಿದೆ. ಭಾರಲೋಹ, ಕ್ರಿಮಿನಾಶಕಗಳಂತಹ ರಾಸಾಯನಿಕಗಳು, ರೋಗ ಹರಡುವ ಮತ್ತು ಬ್ಯಾಕ್ಟೀರಿಯಾಗಳ ಇರುವಿಕೆಯನ್ನು ಗುರುತಿಸಿವೆ. ಅವುಗಳಲ್ಲಿ ಕರ್ನಾಟಕ ಮಲೆನಾಡಿನ ಭಾಗವಾದ ಭದ್ರಾವತಿಯೂ ಒಂದು.

ನಿರಂತರ ಗಣಿಗಾರಿಕೆಯಿಂದಾಗಿ ಮಣ್ಣು ಅಧಿಕ ಪ್ರಮಾಣದಲ್ಲಿ ಕೊಚ್ಚಿ ಹೋಗಿ ನದಿಗಳನ್ನು ಸೇರಿ ಅಲ್ಲಿಂದ ಸಮುದ್ರವನ್ನು ಸೇರಿ, ಸಮುದ್ರದ ನೀರಿನ ಮಟ್ಟ ಗಣನೀಯವಾಗಿ ಏರುತ್ತಲಿದೆ. ಭಾರ ಲೋಹಗಳು ಸಮುದ್ರವನ್ನು ಸೇರಿ ಅಲ್ಲಿ ಅಪಾರ ಜಲಜೀವರಾಶಿಗೆ ತೊಂದರೆಯೊಡ್ಡಿದೆ.

ಮಾನವನ ಈ ಕಾರ್ಯಚರಣೆಯಿಂದಾಗಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ (KNP) ಉಭಯವಾಸಿಗಳ (Amphibian) ಆವಾಸಕ್ಕೆ ತೊಂದರೆಯುಂಟಾಗಿ ಅವುಗಳ ವೈವಿಧ್ಯತೆ ಮತ್ತು ವಿವಿದೆಡೆಯಲ್ಲಿನ ವಿತರಣೆಯಲ್ಲಿ ಧಕ್ಕೆಯುಂಟಾಗಿದೆ. ಇಲ್ಲಿ ಕಬ್ಬಿಣದ ಗಣಿಗಾರಿಕೆ ಮತ್ತು ಅದಕ್ಕೆ ಸಂಬಂಧಿಸಿದ ಮಾನವ ಕಾರ್ಯಚರಣೆಯಿಂದ ಈ ಜೀವಿಗಳ ಆವಾಸ ಕಡಿತಗೊಂಡಿದ್ದು, ಕಾರ್ಯಚರಣೆ ಕೈಗೊಂಡ ಪ್ರದೇಶದಲ್ಲಿ ಅವುಗಳ ಸಂಖ್ಯೆ ತೀರ ಕಡಿಮೆ ಇದ್ದು, ಕಾರ್ಯಚರಣೆ

ನಡೆಯದ ಭಾಗದಲ್ಲಿ ಅವುಗಳ ಸಂಖ್ಯೆ ಹೆಚ್ಚಾಗಿರುವುದು ಸಂಶೋಧನೆಯ ಮುಖಾಂತರ ಕಂಡುಬಂದಿದೆ. 36 ಅನಾರ್ನ್ಸ್ (anarans) ಪ್ರಭೇದಗಳು 6 ಕೆಸಿಲಿಯನ್ (Caecillians) ಪ್ರಭೇದಗಳನ್ನು ಹೊಂದಿರುವಂತೆ ದಾಖಲಾಗಿದ್ದ ಕುದುರೆಮುಖ ಪ್ರದೇಶ ಉಭಯವಾಸಿಗಳ ಒಟ್ಟು ಪ್ರಭೇದದಲ್ಲಿ ಹೆಚ್ಚು ವೈವಿಧ್ಯತೆ ಹೊಂದಿದ್ದು, ಭಾರತದ ಶೇಕಡ 20 ರಷ್ಟು ಉಭಯವಾಸಿ ವೈವಿಧ್ಯತೆಯನ್ನು ತನ್ನಲ್ಲಿ ಹೊಂದಿದೆ. ( S.V. Krishna murthy) Amphibian assemblages in and undistributed indistrial and distributed areas of kuduremukha National park, centred western ghats, India).

ಕೊಡಚಾದ್ರಿಯ ಕಣಿವೆ ತನ್ನಲ್ಲಿ ಅಪಾರ ಜೀವ ವೈವಿಧ್ಯಗಳನ್ನು ಹೊಂದಿದೆ. ಈ ಕಣಿವೆಯ ವ್ಯಾಪ್ತಿಯಲ್ಲೇ ಬರುವ ಅಂಬಾರಗುಡ್ಡದಲ್ಲಿ ಮೂರು ವರ್ಷಗಳ ಹಿಂದೆ ಆರಂಭವಾದ ಮ್ಯಾಂಗನೀಸ್ ಗಣಿಗಾರಿಕೆಯಿಂದಾಗಿ ಸ್ಥಳೀಯರಿಗೆ ಅನೇಕ ತೊಂದರೆಗಳನ್ನು ತೊಂದೊಡ್ಡಿವೆ. ಇದರೊಂದಿಗೆ ತೀವ್ರಗೊಂಡ ಪ್ರಾಕೃತಿಕ ಸಂಪತ್ತಿನ ನಾಶ ಇಲ್ಲಿ ಇನ್ನೂ ಹಲವಾರು ಸಮಸ್ಯೆಗಳ ಹುಟ್ಟಿಗೆ ಕಾರಣವಾಗಿದೆ.

ಶರಾವತಿ ನದಿಯ ಉಪನದಿಗಳಾದ ಎಣ್ಣೆಹೊಳೆ, ನಾಗೋಡಿಹೊಳೆ, ಹಾಳಸಸಿ ಹೊಳೆಗಳ ಉಗಮಸ್ಥಾನ ಅಂಬಾರಗುಡ್ಡ. ವಿಶ್ವವಿಖ್ಯಾತ ಜೋಗ ಜಲಪಾತಕ್ಕೆ ನೀರು ಹರಿಯುವುದು ಇಲ್ಲಿಂದಲೇ. ಪಶ್ಚಿಮ ಘಟ್ಟಗಳಲ್ಲಿ ಭೂಮಿಯ ಮೇಲಿನ ಪ್ರಾಕೃತಿಕ ಸಂಪತ್ತನ್ನು ಬಳಸಿಕೊಳ್ಳುವುದಷ್ಟೇ ಅಲ್ಲದೇ ಭೂಮಿಯೊಳಗಿನ ಸಂಪತ್ತನ್ನು ಲೂಟಿ ಮಾಡಲು ಹೊರಟಿರುವ ಮಾನವನ ದುರಾಸೆಗೆ ಹಿಡಿದ ಕೈಗನ್ನಡಿ ಈ ಕೊಡಚಾದ್ರಿಯ ಕಣಿವೆ.

ಸದಾ ದಟ್ಟ ಹಸುರಿನಿಂದ ಕಂಗೊಳಿಸುತ್ತಿದ್ದ ಈ ನಿಬಿಡ ಕಾನನದ ಮಧ್ಯೆ ಅಲ್ಲಲ್ಲಿ ಬೋಳಾಗಿರುವುದು ಕಂಡು ಬರುತ್ತದೆ. ಬೃಹತ್ ಯಂತ್ರಗಳ ಸಹಾಯದಿಂದ ಕಾಡು ಕಡಿದು, ನೆಲ ಬಗೆದು ಮ್ಯಾಂಗನೀಸ್ ಅದಿರನ್ನು ಪಡೆದು ಲಾರಿಗಳಲ್ಲಿ ತುಂಬಿಸಿ, ಕಾರ್ಖಾನೆಗಳಿಗೆ ಸಾಗಿಸಲಾಗುತ್ತಿದೆ. ಇದರಿಂದ ಪ್ರಕೃತಿಯ ನಾಶ ನಿರಂತರವಾಗಿ ಅತ್ಯಂತ ವೇಗವಾಗಿ ನೆಡೆಯಿತು. ಬೃಹತ್ ಯಂತ್ರಗಳು ಕಾರ್ಯನಿರ್ವಹಿಸುತ್ತಾ ಇಲ್ಲಿನ ಗಾಳಿ, ಮರಗಿಡಗಳನ್ನು ನಾಶ ಪಡಿಸುತ್ತಾ ಪರಿಸರ ಮಾಲಿನ್ಯಕ್ಕೆ ತಮ್ಮ ಕೊಡುಗೆಯನ್ನು ನೀಡಿದವು. ಸ್ಥಳೀಯರು ಹಾಗು ಪರಿಸರ ವಾದಿಗಳ ವಿರೋಧ ಮತ್ತು ಹೋರಾಟದ ಪರಿಣಾಮವಾಗಿ ಈ ಪ್ರದೇಶದಲ್ಲಿ ಗಣಿಗಾರಿಕೆ ತಾತ್ಕಲಿಕವಾಗಿ ಸ್ಥಗಿತಗೊಂಡಿದೆ.

ಆದರೆ ಈಗ ಇಲ್ಲಿನ ಸುತ್ತಮುತ್ತಲ ಗ್ರಾಮಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಉಲ್ಬಣಿಸಿದೆ. ಗಣಿಗಾರಿಕೆಯಿಂದಾಗಿ ಮಳೆಯಲ್ಲಿ ಕೊಚ್ಚಿಕೊಂಡು ನೈಸರ್ಗಿಕ ನೀರಿನ ಮೂಲಗಳಲ್ಲಿ ಸಂಗ್ರಹಗೊಳ್ಳುವ

ಮ್ಯಾಂಗನೀಸ್ ಅದಿರು ಹೊಂದಿದ ಮಣ್ಣು, ನೀರಿನ ಗುಣಲಕ್ಷಣವನ್ನೇ ಬದಲಾಯಿಸಿದೆ. ಆ ನೀರು ಕುಡಿಯಲು ಯೋಗ್ಯವಾಗಿರದೆ ವಿಷವಾಗಿ ಪರಿಣಮಿಸಿದೆ.

ಮಳೆಗಾಲದಲ್ಲಿ ಈ ಗಣಿಗಾರಿಕೆಯ ಬೋಳು ಗುಡ್ಡಗಳಿಂದ ಮ್ಯಾಂಗನೀಸ್ ಅದಿರು ಮಿಶ್ರಿತ ಮಣ್ಣು ಕೆಳಗೆ ಹರಿದು, ಕೆರೆ, ಹಳ್ಳ, ಬಾವಿಗಳಲ್ಲಿ ಶೇಖರಣೆಗೊಂಡಿದೆ. ಗದ್ದೆಗಳಲ್ಲೂ ಈ ಕಲುಷಿತ ಮಣ್ಣು ಕೊಚ್ಚಿಕೊಂಡು ಬಂದು ನಿಂತು ಫಲವತ್ತಾಗಿದ್ದ ಮಲೆನಾಡಿನ ಕೃಷಿ ಭೂಮಿಯನ್ನುಬಂಜರಾಗಿಸುತ್ತದೆ. ಕೃಷಿ ಉತ್ಪನ್ನಗಳ ಇಳುವರಿ ಗಣನೀಯವಾಗಿ ಕ್ಷೀಣಿಸ ಹತ್ತಿದೆ. ಕೊಡಚಾದ್ರಿಯ ಕಣಿವೆಯಲ್ಲಿ ಹುಟ್ಟುವ ಶರಾವತಿಯ ಉಪನದಿಗಳು ಮ್ಯಾಂಗನೀಸ್ ಅದಿರು ಮಿಶ್ರಿತ ಮಣ್ಣನ್ನು ಕೊಚ್ಚಿಕೊಂಡು ಲಿಂಗನಮಕ್ಕಿ ಅಣೆಕಟ್ಟೆಗೆ ಸೇರ್ಪಡೆಯಾಗುತ್ತದೆ.

ಅಂಬಾರ ಗುಡ್ಡದ ಬುಡದ ಕಾಡಿನಲ್ಲಿ ವಾಸಿಸುವ `ಕುಣುಬಿ` ಬುಡಕಟ್ಟು ಜನಾಂಗದವರಲ್ಲಿ ಕೀಲು ನೋವು, ವಾಂತಿ ಭೇದಿ, ಜ್ವರದ ಲಕ್ಷಣಗಳಿರುವ ನಿಗೂಢ ಕಾಯಿಲೆ ಕಾಣಿಸಿಕೊಂಡಿದ್ದು, ಆ ಕಾಯಿಲೆಯಿಂದ ಬಳಲಿ ಬುಡಕಟ್ಟು ಜನಾಂಗದ ಮಹಿಳೆಯೊಬ್ಬಳು ಸಾವಿಗೀಡಾದ ಸುದ್ದಿ ವರದಿಯಾಗಿತ್ತು. ಈ ನಿಗೂಡ ಕಾಯಿಲೆಗೆ ಕಾರಣ ಗುಡ್ಡದ ನೀರು ಕಲುಷಿತಗೊಂಡಿದ್ದು. ತಮ್ಮ ಅರಿವಿಗೆ ಬಾರದಿದ್ದರಿಂದ ಆ ಕಲುಷಿತ ನೀರನ್ನು ಸೇವಿಸಿದ್ದರಿಂದ ಈ ಬುಡಕಟ್ಟು ಜನಾಂಗದವರಲ್ಲಿ ಈ ಕಾಯಿಲೆ ಕಂಡು ಬಂದಿದೆ.

ಮ್ಯಾಂಗನೀಸ್ ಅದಿರನ್ನು ಸಾಗಿಸುವ ಸಲುವಾಗಿ ಈ ಎತ್ತರದ ಗುಡ್ಡದ ಮೇಲಿನ ಸಸ್ಯ ರಾಶಿಯನ್ನು ನಾಶಮಾಡಿ, ಗುಡ್ಡವನ್ನು ಕಡಿದು ರಸ್ತೆ ನಿರ್ಮಿಸಲಾಗಿದೆ. ಪರಿಣಾಮ ಅಪಾರ ಸಸ್ಯ ರಾಶಿಯ ನಾಶದೊಂದಿಗೆ, ಪ್ರಾಣಿ ಸಂಕುಲ ಕೂಡ ಅಧಿಕ ಪ್ರಮಾಣದಲ್ಲಿ ನಾಶಗೊಂಡಿದೆ. ವನ್ಯ ಮೃಗಗಳು ತಮ್ಮ ಆವಾಸವನ್ನು ಕಳೆದುಕೊಂಡು ಹೇಳ ಹೆಸರಿಲ್ಲದೆ ಹೋಗಿವೆ.

ಮಲೆನಾಡಿನ ಬೆಟ್ಟ ಗುಡ್ಡ, ಕಾನನ ಹಾಗು ನದಿಗಳ ಸ್ವರೂಪವನ್ನೇ ಬದಲಾಯಿಸಿ, ಮರುಭೂಮಿಯನ್ನಾಗಿಸಿ ಬಿಡುವ ಗಣಿಗಾರಿಕೆಯಿಂದ ಆಗುವ ಆರ್ಥಿಕ ಲಾಭಕ್ಕಿಂತ ಆಗುವ ಸಾಮಾಜಿಕ, ಪ್ರಾಕೃತಿಕ ನಷ್ಟವೇ ಹೆಚ್ಚು.

ಕೇವಲ ಸಸ್ಯ ಮತ್ತು ಪ್ರಾಣಿ ಸಂಕುಲಕಷ್ಟೇ ಅಲ್ಲದೇ ಮಾನವರ ಬದುಕಿಗೂ ಸಂಚಕಾರಿಯಾದ ಮಾನವನ ಈ ಕಾರ್ಯದಿಂದಾಗಿ ಭೂ ಪದರಗಳು ಸಡಿಲಗೊಂಡು ಆಳ ಗಣಿಗಾರಿಕೆಯಿಂದಾಗಿ ಭೂಕಂಪಕ್ಕೆಡೆ ಮಾಡಿಕೊಡುತ್ತದೆ.

**ಹಸಿರು ಮನೆ ಪರಿಣಾಮ:-** ಇಲ್ಲಿನ ಕಾಡುಗಳಲ್ಲಿನ ಮರಗಿಡಗಳನ್ನು ಕೈಗಾರಿಕೆ, ಸಾರಿಗೆ, ರೈಲ್ವೆ ಹಾಗು ಬೃಹತ್ ನೀರಾವರಿ ಯೋಜನೆಗಳಿಗಾಗಿ ನಿರ್ಮೂಲನೆ ಮಾಡಲಾದ ಪರಿಣಾಮ, ಇಂದು ತಲೆ ಎತ್ತಿರುವ ಸಮಸ್ಯೆ ಹಸಿರು ಮನೆ ಪರಿಣಾಮ (Green house Effect).

ಕಾಡುಗಳ ನಾಶ ಹಾಗು ಪರಿಸರ ಮಾಲಿನ್ಯದಿಂದಾಗಿ ಈ ಪ್ರದೇಶದ ವಾತಾವರಣದಲ್ಲಿ ಹೆಚ್ಚಾಗುವ ವಾತಾವರಣದ ಇಂಗಾಲದಡೈಆಕ್ಸೈಡ್ (Corbon Dioxide) ಪ್ರಮಾಣ ಹೆಚ್ಚಾಗುತ್ತದೆ.

ಕಳೆದ ಐದು ದಶಕಗಳಿಂದ ನಿರಂತರ ಶೋಷಣೆಗೊಳಗಾದ ಮಲೆನಾಡಿನ ಸಸ್ಯ ಸಂಕುಲದ ತೀವ್ರ ನಾಶದಿಂದಾಗಿ ಇಂಗಾಲದ ಡೈ ಆಕ್ಸೈಡ್ ಅಂಶ ಹೆಚ್ಚಿದಂತೆಲ್ಲಾ ಭೂಮಿಗೆ ಬೀಳುವ ಸೂರ್ಯನ

ಕಿರಣಗಳಿಂದ ದೊರೆಯುವ ಶಾಖವನ್ನು ಭೂಮಿಗೆ ಪುನ: ಮರುಕಳಿಸುವ ಇಂಗಾಲದ ಡೈ ಆಕ್ಸೈಡ್ ಮಲೆನಾಡಿನಲ್ಲಿ ಇಂದು ದಾಖಲಾಗಿರುವ ಹೆಚ್ಚಿನ ಉಷ್ಣಾಂಶಕ್ಕೆ ಕಾರಣವಾಗಿದೆ. ಪರಿಣಾಮವಾಗಿ ಜೀವಸಂಕುಲ ಅಷ್ಟೊಂದು ಉಷ್ಣತೆಗೆ ಒಗ್ಗಿಕೊಳ್ಳಲಾರದೆ ವಲಸೆ ಹೋಗುತ್ತವೆ. ಇಲ್ಲವೇ ನಾಶಹೊಂದುವ ಸಾಧ್ಯತೆಯೂ ಇದೆ.

ವಾತಾವರಣದ ಮೇಲೆ ಗಾಢವಾದ ಪ್ರಭಾವ ಬೀರುವ ಹಸಿರು ಮನೆ ಪರಿಣಾಮದಿಂದಾಗಿ 4C° ಏರಿಕೆಯಾಗಿದೆ. ಕಾಡಿನ ತೇವಾಂಶ ಆವಿಯಾಗುವುದರಿಂದ ಅನೇಕ ಸಸ್ಯ ಪ್ರಭೇದಗಳು, ಮಾನ್ಸೂನ್ ಸಸ್ಯಗಳು, ಜರಿಗಿಡಗಳು, ಆರ್ಕಿಡ್‌ಗಳು ನಾಶವಾಗುತ್ತವೆ.

ಭೂಮಿಯ ತಾಪಮಾನದ ಏರಿಕೆಗೆ ಕಾರಣವಾಗುವ ಇಂಗಾಲದ ಡೈ ಆಕ್ಸೈಡ್ ಉತ್ತರ ಹಾಗು ದಕ್ಷಿಣ ಧ್ರುವ ಪ್ರದೇಶದಲ್ಲಿನ ಮಂಜು ಕರಗಿ ಸಾಗರಮಟ್ಟ 2100 ಇಸವಿಯಷ್ಟು ಹೊತ್ತಿಗೆ ಒಂದು ಮೀಟರ್ ಅಧಿಕವಾಗಬಲ್ಲದೆಂದು ಅಂದಾಜು ಮಾಡಲಾಗಿದೆ. ಇದರಿಂದಾಗಿ ಕರಾವಳಿಯ ತೀರ ಪ್ರದೇಶವು ಇಂಚಿಂಚು ಮುಳುಗಡೆಯಾಗುತ್ತಾ ಸಾಗಿದೆ. ಇನ್ನು ನೂರು ವರ್ಷಗಳಲ್ಲಿ 3,000 ಚದುರ ಕಿ.ಮೀ. ಸಮುದ್ರದ ತೀರ ಪ್ರದೇಶ ಸಾಗರದಲ್ಲಿ ಮುಳುಗಡೆ ಗೊಳ್ಳಲಿದೆ.

ಸಹ್ಯಾದ್ರಿಯ ಅರಣ್ಯ ಪ್ರದೇಶ ಸ್ವಾತಂತ್ರ್ಯೋತ್ತರಕ್ಕೆ ಹೋಲಿಸಿದರೆ ಇಂದು ಗಣನೀಯವಾಗಿ ಕ್ಷೀಣಗೊಳ್ಳುತ್ತಿದೆ. 1972 ನೇ ಇಸವಿಯಿಂದ 1985 ರವರೆಗೆ ವಾರ್ಷಿಕವಾಗಿ ಶೇಕಡ 2.4 ರಷ್ಟು ನಾಶಗೊಂಡಿದೆಯಾದರೆ, 1972 ರಂದ 1989 ರವರೆಗೆ ಒಟ್ಟಾರೆ ನಾಶಗೊಂಡ ಅರಣ್ಯ ಪ್ರದೇಶ 34% ಎಂಬುದು ಬ್ಲಾಕ್‌ವೆಲ್ ಸೈನರ್ಜಿ ಓರ್ನಲ್ ಬಯೋಜಿಯೋಗ್ರಫಿಯಲ್ಲಿ (Block well synergy J Biogeography volume 31 issue 1 page 123-136 January 2004 )ವಿಜ್ಞಾನಿಗಳ ಸಮೀಕ್ಷಾ ವರದಿಯಾದರೆ, ಮೇಯರ್ಸ್ (Mayers) ಮತ್ತು ಸಹ ವಿಜ್ಞಾನಿಗಳು 2000 ದ

ಇಸವಿಯಲ್ಲಿ ನೀಡಿದ ಸಮೀಕ್ಷಾ ವರದಿಯ ಪ್ರಕಾರ ಈಗ ಪಶ್ಚಿಮಘಟ್ಟಗಳಲ್ಲಿನ ಶೇಕಡ 68 ರಷ್ಟು ನೈಜವಾದ ಕಾಡುಗಳು (vegetation) ಮಾತ್ರ ಇದೆ. ಈಗ ಪಶ್ಚಿಮ ಘಟ್ಟಗಳಲ್ಲಿ ಉಳಿದಿರುವ ಕಾಡಿನ ವಿಸ್ತೀರ್ಣ 8000 ಚ.ಕಿ. ಮಾತ್ರವೆ. ಈ ಕಾಡುಗಳಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕ್ಷೀಣಗೊಳ್ಳುತ್ತಿರುವ ಸಸ್ಯಗಳಲ್ಲಿ ಬೃಹತ್ ಮರಗಳು ಮತ್ತು ಬಿದಿರುಗಳದ್ದೆ ಸಿಂಹಪಾಲು.

`` ಈ ಜಿಲ್ಲೆಯ ಪ್ರಾಕೃತಿಕ ಸಂಪತ್ತೇ ಇಲ್ಲಿಗೆ ವಿಪತ್ತಾಗಿ ಪರಿಣಮಿಸಿದೆ`` ಎಂದು ಹಿರಿಯ ಪತ್ರಕರ್ತ ಮತ್ತು ಅಪ್ಪಿಕೊ- ಚಿಪ್ಕೋ ಆಂದೋಲನದ ಸಂಯೋಜಕರಾದ ಪಾಂಡುರಂಗ ಹೆಗ್ಗಡೆ ವಿಷಾದ ವ್ಯಕ್ತ ಪಡಿಸಿದ್ದಾರೆ. ಈ ಕಾಯ್ದಿಟ್ಟ (Reserved) ಅರಣ್ಯದ ಮತ್ತೊಂದು ದುರ್ವಿಧಿಯೆಂದರೆ, ಸ್ವಾತಂತ್ರ್ಯದ ನಂತರ ಇದನ್ನು ನಮ್ಮ ಸರ್ಕಾರ `` ಹಿಂದುಳಿದ ಪ್ರದೇಶವೆಂದು ಘೋಷಿಸಿದ್ದು`` ಪರಿಣಾಮವಾಗಿ ಇಲ್ಲಿನ ಕಾಡುಗಳಲ್ಲಿನ ಮರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಕಡಿಯಲು ಪರವಾನಗಿಯೊಂದಿಗೆ, ರಾಜ್ಯ ಸರ್ಕಾರಕ್ಕೆ ಹಾಗು ಖಾಸಗಿ ಉದ್ದಿಮೆಗಳಿಗೆ ಗುತ್ತಿಗೆ ನೀಡಲಾಯಿತು.

ತದನಂತರ ಪೇಪರ್ ಮತ್ತು ಪ್ಲೇವುಡ್ ಕಾರ್ಖಾನೆಗಳಿಗೆ ಹೇರಳವಾಗಿ ಇಲ್ಲಿನ ಬಿದಿರು ಮತ್ತು ಮರಗಳನ್ನು ಕಡಿದು ಸಾಗಿಸಲಾಯಿತು. ಇದರೊಟ್ಟಿಗೆ, ಮರಗಳ ಕಳ್ಳಸಾಗಾಣಿಕೆಗೆ ಸಹ ದಾರಿ ಮಾಡಿಕೊಟ್ಟಂತಾಯಿತು.

ಬೆಲೆ ಬಾಳುವ ಮರಮುಟ್ಟುಗಳ ಆಸೆಗಾಗಿ, ತೇಗ, ಬೀಟೆ, ಶ್ರೀಗಂಧ ಇತ್ಯಾದಿ ಮರಗ ಳನ್ನು ಕಡಿದು ಕಳ್ಳಸಾಗಾಣಿಕೆ ಮಾಡಲಾಯಿತು. ಹೀಗೆ ಲೂಟಿ ಮಾಡಲ್ಪಟ್ಟ ಪ್ರಾಕೃತಿಕ ಸಸ್ಯ ಸಂಪತ್ತನ್ನು ಮರು ಸೃಷ್ಟಿಸುವ ಸಲುವಾಗಿ ನಾಶಗೊಂಡ ಅರಣ್ಯದ ಪ್ರದೇಶದಲ್ಲಿ ತೇಗ, ನೀಲಗಿರಿ, ಅಕೇಶಿಯಾ ಹಾಗು ಕ್ಯಾಸೋರಿನಾಗಳ ಮಾನೊಕಲ್ಚರ್, ವೈಜ್ಞಾನಿಕ ಅರಣ್ಯೀಕರಣ (ಸೈಂಟಿಫಿಕ್ ಫಾರೆಸ್ಟ್ರಿ) ಎಂಬ ಹೆಸರಿನಲ್ಲಿ ಸರ್ಕಾರದಿಂದ ಆರಂಭವಾಗಿದೆ.

ಇದು ನೈಸರ್ಗಿಕ ಅರಣ್ಯದ ಪರಿಕಲ್ಪನೆಯನ್ನೇ ಮೊಟಕು ಗೊಳಿಸುತ್ತದೆ. ಮಾನೋಕಲ್ಚರ್‌ನಿಂದಾಗಿ ಪರಿಸರದಲ್ಲಿ ಕಂಡು ಬರುತ್ತಿದ್ದ ಅಪಾರ ಜೈವಿಕ ವೈವಿಧ್ಯತೆ ಮಾಯವಾ ಗುತ್ತದೆ. ಹೊಸ ಆರ್ಥಿಕ ನೀತಿಗಳು ಸಹ ಮಲೆನಾಡಿನ ಅರಣ್ಯದ ಪತನಕ್ಕೆ ಕೊಡುಗೆ ನೀಡಿದವು.

ದೇಶದಲ್ಲಾದ ಔದ್ಯೋಗಿಕ ಬೆಳವಣಿಗೆಯಿಂದಾಗಿ ಅಗತ್ಯ ಮೂಲ ವಸ್ತುಗಳ ಪೂರೈಕೆಗಾಗಿಯೂ ಇಲ್ಲಿನ ಪ್ರಾಕೃತಿಕ ಸಂಪತ್ತು ಬಹಳಷ್ಟು ಕರಗಿತು.

ಜೀವ ವೈವಿಧ್ಯತೆಯನ್ನು ಹೆಚ್ಚಿಸುವ ಸಲುವಾಗಿ ಪಶ್ಚಿಮ ಘಟ್ಟಗಳಲ್ಲಿ ಕೈಗೊಂಡರೂ ಸಹ ಪ್ರಕೃತಿಯಲ್ಲಿ ಮಾನವನ ಈ ಹಸ್ತಕ್ಷೇಪದಿಂದಾಗಿ ಅನೇಕ ಪಕ್ಷಿಪ್ರಭೇದಗಳು ಕಣ್ಮರೆಯಾಗಲು

ಸಹ ಕಾರಣವಾಗಿದೆ. ಇಲ್ಲಿನ ಕಾಡುಗಳಲ್ಲಿನ ಸಸ್ಯ ವೈವಿಧ್ಯತೆಯೇ ವೈವಿಧ್ಯಮಯ ಹಕ್ಕಿ ಪಕ್ಷಿಗಳ ಸಂಖ್ಯೆಗೆ ಕಾರಣವಾಗಿತ್ತು. ಒಂದೇ ವಿಧದ ಸಸ್ಯ ಬೆಳವಣಿಗೆಯಿಂದಾಗಿ ಕೆಲವು ಸೀಮಿತ ಹಕ್ಕಿ ಪಕ್ಷಿಗಳು ಮಾತ್ರ ಅಲ್ಲಿ ಗೂಡುಕಟ್ಟ ನೆಲೆಸ ಬಹುದೇ ಹೊರತು, ಎಲ್ಲಾ ಪಕ್ಷಿಗಳು ಅಲ್ಲೆ ನೆಲೆಸಲು ಖಂಡಿತ ಸಾಧ್ಯವಿಲ್ಲ. ಪರಿಣಾಮ ಯಾವುದೇ ಸಸ್ಯವನ್ನು ಮನೋಕಲ್ಚರ್ ಮಾಡಲಾಗುತ್ತದೆಯೋ ಅಂತಹ ಮರಗಳಲ್ಲಿ ಆಶ್ರಯ ಪಡೆಯುತ್ತಿದ್ದ ಪಕ್ಷಿಗಳ ಸಂತತಿ ಮಾತ್ರ ಅಭಿವೃದ್ಧಿ ಹೊಂದುತ್ತದೆ. ಇತರೆ ಪಕ್ಷಿಗಳಿಗೆ ಆವಾಸದ ಕೊರತ್ಯೆಅಲಭ್ಯತೆಯಿಂದಾಗಿಯೋ ಅವುಗಳ ಸಂತತಿ ಕ್ಷೀಣಿಸುತ್ತಿದೆ.

ಉದಾ:- ತೇಗದ ಮನೋಕಲ್ಚರ್ ಮಲೆನಾಡಿನಲ್ಲಿ ಜೀವ ವೈವಿಧ್ಯತೆ ಹೆಚ್ಚಿಸುವ ಸಲುವಾಗಿ ಮಾಡಿದರೂ ಸಹ ಇದು ಗೂಡು ಕಟ್ಟುವ ವೈವಿಧ್ಯಮಯ ಹಕ್ಕಿಗಳನ್ನು ಆಕರ್ಷಿಸುವಲ್ಲಿ ವಿಫಲವಾಯಿತು.

ನಿಸರ್ಗ ಚೆಲುವಿನ ಈ ಪ್ರದೇಶಕ್ಕೆ ಭೇಟಿ ಕೊಡುವ ಪ್ರವಾಸಿಗರ ಸಂಖ್ಯೆ ಕಡಿಮೆ ಏನಿಲ್ಲ. ಇಲ್ಲಿನ ಸೌಂದರ್ಯವನ್ನೇ ಮೂಲ ಬಂಡವಾಳವನ್ನಾಗಿಸಿಕೊಂಡಿರುವ ಸರ್ಕಾರ ಪಶ್ಚಿಮ ಘಟ್ಟಗಳ ಅರಣ್ಯಗಳ ನಡುವೆ ಹಲವಾರು ಎಕರೆಗಟ್ಟಲೆ ಪ್ರದೇಶವನ್ನು ರೆಸಾರ್ಟ್‌ಗಳನ್ನು ಮಾಡಿ, ಅಥವಾ ನಿರ್ಮಾಣ ಮಾಡಲು ಪರವಾನಗಿ ನೀಡಿಯೋ ಅರಣ್ಯ ನಾಶಕ್ಕೆ ಪ್ರೇರಣೆ ನೀಡಿದೆ. ಮಾನವರು ನಿಸರ್ಗದ ಸೌಂದರ್ಯವನ್ನು ಆಸ್ವಾದಿಸುವ ಸಲುವಾಗಿ ಆ ನಿಸರ್ಗವನ್ನು ಹಾಳುಗೆಡುವುದು ಎಷ್ಟರ ಮಟ್ಟಿಗೆ ಸರಿ ?.

ಕಾಡು ಕಡಿದು ಕಟ್ಟಡಗಳನ್ನು ಕಟ್ಟಿ ಸುತ್ತಲೂ ಬೆಟ್ಟಗಳ ಮೇಲೆ ನಿರ್ಮಿಸಿರುವ ರೆಸಾರ್ಟ್‌ಗಳಿಂದಾಗಿ ಪರಿಸರಕ್ಕೆ ಆಗುವ ಉಪಯೋಗಕ್ಕಿಂತ ತೊಂದರೆಯೇ ಹೆಚ್ಚು. ಇಲ್ಲಿ ಮೋಜಿಗಾಗಿ ಬರುವ ಮಂದಿಯೇ ಹೆಚ್ಚಾಗಿದ್ದು, ಅವರು ಉಪಯೋಗಿಸಿ ಬಿಸಾಡುವ ಪ್ಲಾಸ್ಟಿಕ್‌ಗಳು, ಗಾಜಿನ ಬಾಟಲಿಗಳು, ಕಸ ಕಡ್ಡಿ ಇತ್ಯಾದಿಗಳು ಇಲ್ಲಿನ ಪರಿಸರವನ್ನು ಮಾಲಿನ್ಯಗೊಳಿಸಿ ಮತ್ತಷ್ಟು ಹಾಳು ಗೆಡವಿವೆ. ಆರ್ಥಿಕವಾಗಿ ಲಾಭದಾಯಕವಾಗಿರುವ ಪ್ರವಾಸೋದ್ಯಮ ಮಲೆನಾಡಿಗೆ ಕೊಟ್ಟ ಕೊಡುಗೆಗಿಂತಾ ಇಲ್ಲಿಂದ ಕಿತ್ತುಕೊಂಡಿದ್ದೆ ಹೆಚ್ಚು. ಕೇವಲ ಪ್ರವಾಸಿಗರಿಗೆ ರಂಜನೆ ನೀಡುವುದೇ ಇದರ ಮೂಲ ಉದ್ದೇಶವಾದುದ್ದರ ಪರಿಣಾಮ ಮಲೆನಾಡಿನಲ್ಲಿ ಹಲೆವೆಡೆ ನೂರಾರು ಎಕರೆಗಟ್ಟಲೇ ಪ್ರದೇಶದಲ್ಲಿ ತಲೆ ಎತ್ತಿದ ರೆಸಾರ್ಟ್‌ಗಳಿಂದಾಗಿ ಇಂದು ಜೀವ ಸಂಕುಲ ಅಧಿಕ ಪ್ರಮಾಣದಲ್ಲಿ ನಾಶಹೊಂದಿದೆ ಎಂದರೆ ತಪ್ಪಾಗಲಾರದು. ಹೆಚ್ಚು ಹಸಿರಿನಿಂದ ಕಂಗೊಳಿಸುತ್ತಿದ್ದ ಪ್ರದೇಶಗಳು ಕಾಂಕ್ರೀಟ್ 'ಕಾಡುಗಳಾಗಿ ಮಾರ್ಪಡುವ ದಿನಗಳು ಮಲೆನಾಡಿನಲ್ಲಿ ದೂರವಿಲ್ಲ.

# 6.ಆಧುನೀಕರಣದಿಂದ ಸ್ಥಿತ್ಯಂತರಗೊಂಡ ಕೃಷಿ

ಜಾಗತೀಕರಣದ ಪ್ರಭಾವ ಸ್ಥಳೀಯ ಕೃಷಿಯ ಮೇಲೆ ಆಗಾಧವಾಗಿ ಪರಿಣಾಮ ಬೀರಿದೆ. ಮಲೆನಾಡಿನ ಪಾರಂಪರಿಕ ಕೃಷಿ ಆಧುನಿಕರಣಗೊಂಡು ಅನೇಕಾನೇಕ ಬದಲಾವಣೆಗಳಿಗೆಡೆ ಮಾಡಿ ಕೊಟ್ಟಿದೆ. ಇಲ್ಲಿನ ಭೌಗೋಳಿಕ ಪರಿಸರಕ್ಕನುಗುಣವಾಗಿ ಬೆಳೆಯಲ್ಪಡುತ್ತಿದ್ದ ಬೆಳೆಗಳು ಮಲೆನಾಡಿನ ಜನರ ದೈನಂದಿನ ಬದುಕಿನಲ್ಲಿ ಹಾಸುಹೊಕ್ಕಾಗಿದ್ದವು. ಅಂದು ಮೂಲತ:ವಾಗಿ ಆಹಾರ ಉತ್ಪಾದನೆಯೇ ಮುಖ್ಯವಾಗಿದ್ದ ಸಮುದಾಯದ ಅಗತ್ಯಗಳಿಗಾಗಿಯೇ ಶೋಧನೆಗೊಂಡಿದ್ದ ಕೃಷಿಯು ಇಂದಿನ ಉದ್ದೇಶ: ವ್ಯಾಪಾರ ಮತ್ತು ಹೆಚ್ಚಿನ ಲಾಭಗಳಿಕೆಯಿಂದ ಜೀವನ ಮಟ್ಟವನ್ನು ನಿರಂತರವಾಗಿ ಏರಿಸುವುದಾಗಿದೆ.

ಹಿಂದೆಲ್ಲಾ ವೈವಿಧ್ಯತೆಯಿಂದ ಕೂಡಿದ್ದ ಕೃಷಿ ಇಂದು ಜಾಗತಿಕ ಹಸಿವನ್ನು ತಣಿಸುವೆಡೆ ಹೊರಟ ಪರಣಾಮವಾಗಿ ಏಕಮುಖಿಯಾಗಿದೆ. ಆಧುನಿಕ ಕೃಷಿಯ ಅನುಷ್ಠಾನದಿಂದಾಗಿ ಹಿಂದೆ ಇದ್ದಂತಹ ಕೃಷಿ ಪದ್ಧತಿ ಮಲೆನಾಡಿನಲ್ಲಿ ಈಗ ಬದಲಾವಣೆಗೊಂಡಿದ್ದು, ಹಿಂದೆ ಅಡಿಕೆ, ತೆಂಗು, ಅಕ್ಕಿ--- ಇತ್ಯಾದಿ ಸಂಪ್ರಾದಾಯಕ ಬೆಳೆಗಳನ್ನು ಬೆಳೆಯುತ್ತಿದ್ದ ಪ್ರದೇಶವನ್ನು ತೆರವುಗೊಳಿಸಿ, ಅಲ್ಲಿ ರಬ್ಬರ್, ವೆನಿಲ್ಲಾ, ಶುಂಠಿಯ ಕೃಷಿ ಪ್ರಾರಂಭವಾಗಿದೆ.

ಇದರೊಂದಿಗೆ, ನಾಗಾಲೋಟದಿಂದ ಹೆಚ್ಚುತ್ತಿರುವ ಜನಸಂಖ್ಯೆಯಿಂದಾಗಿ ವ್ಯವಸಾಯೋತ್ಪನ್ನಗಳ ಉತ್ಪಾದನೆಯೂ ಹೆಚ್ಚಿಸಬೇಕಾಗುತ್ತದೆ.ಇದಕ್ಕಾಗಿ ಕೃಷಿ ಪದ್ಧತಿಯನ್ನು ಬದಲಾಯಿಸಿ ಕೃಷಿ ಉತ್ಪನ್ನಗಳ ಅಧಿಕ ಇಳುವರಿ ಪಡೆಯುವ ಸಲುವಾಗಿ ಕೀಟನಾಶಕಗಳು ರಾಸಾಯನಿಕ ಗೊಬ್ಬರಗಳ ಬಳಕೆಯಿಂದಾಗಿ ಮಲೆನಾಡಿನಲ್ಲಿ ಅನುಸರಿಸಲಾಗುತ್ತಿದ್ದ ಸಂಪ್ರಾದಾಯಕ ಕೃಷಿ ಸ್ಥಿತ್ಯಂತರಗೊಂಡಿದ್ದು ಸಹಜ. ಕೃಷಿಯಿಂದ ದೂರಸರಿದ ಮಾನವ ಸಂಕುಲ ಇಂದು ಮಲೆನಾಡಿನಲ್ಲಿ ಕೃಷಿ ಮತ್ತು ಪರಿಸರದ ಹೊಸ ಸವಾಲುಗಳನ್ನು ಹುಟ್ಟು ಹಾಕಿದ್ದಾನೆ.

ಭತ್ತ ಸಾಮಾನ್ಯವಾಗಿ ಆಹಾರವಾಗಿ ಬಳಸಲ್ಪಡುವ ಧಾನ್ಯ. ನಮ್ಮ ದೇಶದಲ್ಲಿ ಕಂಡುಬರುವ ವಿವಿಧ ವಾಯುಗುಣ ಹಾಗು ಭೌಗೋಳಿಕ ಪರಿಸರಕ್ಕನುಗುಣವಾಗಿ, ವಿವಿಧ ಪರಿಸರದಲ್ಲಿ ಬೆಳೆದು ಅನೇಕ ಸಾರಿ ಉತ್ಪರಿವರ್ತನೆಗಳಾಗಿ ನೂರಾರು ತಳಿಗಳಿದ್ದವು.

ಮಲೆನಾಡಿನ ರೈತರು ಸಾಂಪ್ರದಾಯಿಕ ತಳಿ ಸಂವರ್ಧನೆಯಿಂದ ಅನೇಕ ಒಳ್ಳೆಯ ಭತ್ತದ ತಳಿಗಳನ್ನು ಅಭಿವೃದ್ದಿ ಪಡಿಸಿಕೊಂಡು ಬಂದಿದ್ದರು. ಹಸಿರು ಕ್ರಾಂತಿಗಿಂತ ಮೊದಲು ನಮ್ಮ ದೇಶದಲ್ಲಿ ಬಳಕೆಯಲ್ಲಿದ್ದ ಬತ್ತದ ತಳಿಗಳ ಸಂಖ್ಯೆ 50,000.

ಮಲೆನಾಡಿನಲ್ಲಿ ಸಂಪ್ರಾದಾಯಕ ಬೆಳೆಯಾದ ಬತ್ತದ ತಳಿಗಳಾದ ಹೆಗ್ಗೆ, ಜೋಳಗ, ಕೊಯಮತ್ತೂರು, ಸಣ್ಣ, ಅಸುಡಿ, ಪುಟ್ಟಸಣ್ಣ, ಕರಿದಡಿ, ದಪ್ಪಬತ್ತ, ವಾಳ್ಯ, ಬೆಟ್‌ಸಣ್ಣ ತಳಿಗಳನ್ನು ಕೃಷಿಕರು ಬೆಳೆಯುತ್ತಿದ್ದರು. ಆದರೆ ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಅಧಿಕ ಇಳುವರಿ ನೀಡುವ ರೋಗ ನಿರೋಧಕ, ಕೀಟ ನಿರೋಧಕ ತಳಿಗಳನ್ನು ವಿವಿಧ ಕಂಪನಿಗಳು ಇಂದು ಅಭಿವೃದ್ಧಿ ಪಡಿಸಿ, ರೈತರಿಗೆ ಮಾರಾಟ ಮಾಡುತ್ತಿವೆ. ಇದರಿಂದಾಗಿ ರೈತರು ಹಿಂದೆಲ್ಲಾ ಬೀಜ ಸಂಗ್ರಹಣೆ ಸ್ವತ: ತಾವೇ ಮಾಡಿ ಅದನ್ನು ನೆಟ್ಟು ಬೆಳೆಸುತ್ತಿದ್ದ ತಳಿ ಸಂವರ್ಧನಾ ಕ್ರೀಯೆ. ಬಹುತೇಕವಾಗಿ ಮೂಲೆ ಹಿಡಿದಿದೆ. ಪರಿಣಾಮವಾಗಿ ಇಂದು ಮಲೆನಾಡಿನ ಸ್ಥಳೀಯ ಹಳೆಯ ಭತ್ತದ ತಳಿಗಳು ಮೂಲೆ ಹಿಡಿದು ಕೂತಿವೆ. ಅವುಗಳ ಬದಲಾಗಿ ಇಂದು ಮಲೆನಾಡಿನಾದ್ಯಂತ ಕಂಪನಿಗಳಿಂದ ಸರಬರಾಜಾಗುವ ತಳಿ ಗಳಾದ ಇಂಟನ್, ಜಯಾ, ಗೌರಿ ಇತ್ಯಾದಿ ತಳಿಗಳು ಸಾಮಾನ್ಯವಾಗಿವೆ ಎಂಬ ಅಂಶ ಆ ಪ್ರದೇಶದಲ್ಲಿ ಕ್ಷೇತ್ರ ಕಾರ್ಯಕೈಗೊಂಡಾಗ ತಿಳಿದುಬಂದಿತು. ಆಧುನಿಕತೆಯಿಂದಾಗಿ ಈ ರೀತಿಯ ಜೀನಿಯ ವೈವಿಧ್ಯತೆಯು ಬಹುತೇಕ ನಾಶಹೊಂದುತ್ತಿವೆ.

## ಸಂದರ್ಶನ - 1

1.ಹೆಸರು : ಸುಬ್ಬಣ್ಣ
ವಯಸ್ಸು; 50 ವರ್ಷ
ವೃತ್ತಿ : ಕೃಷಿಕರು
ಸ್ಥಳ : ಬೆಕ್ಕನೂರು

1. ಈಹಿಂದೆ ಮಲೆನಾಡಿನಲ್ಲಿ ಅನುಸರಿಸಲಾಗುತ್ತಿದ್ದ ಕೃಷಿ ಪದ್ಧತಿ ಹೇಗಿತ್ತು?

ಉ. ಕೃಷಿ ಚಟುವಟಿಕೆಗಳನ್ನು ಪ್ರಾಣಿಗಳನ್ನು ಉಪಯೋಗಿಸಿ ಅಥವಾ ಕೂಲಿಯಾಳುಗಳ ಸಹಾಯದಿಂದ ಮಾಡುತ್ತಿದ್ದರು. ಕೊಟ್ಟಿಗೆ ಗೊಬ್ಬರ, ಸೊಪ್ಪಿನೆಲೆ ಗೊಬ್ಬರ ಬಳಸುತ್ತಿದ್ದರು.

2. ಈಗ ಇರುವ ಕೃಷಿ ಪದ್ದತಿ.

ಉ. ಈಗ ಎಲ್ಲದಕ್ಕೂ ಯಂತ್ರಗಳಿವೆ, ಕೃಷಿ ಸುಲಭವಾಗಿದೆ. ಹೊಸ ಅಧಿಕ ಇಳುವರಿ ನೀಡುವ ತಳಿಗಳನ್ನು ಬಳಸುತ್ತಿದ್ದಾರೆ.

3. ಬದಲಾವಣೆಗೆ ಕಾರಣಗಳು.

ಉ. ಅಧಿಕ ಮತ್ತು ಬೇಗ ಇಳುವರಿ ಪಡೆಯುವ ಸಲುವಾಗಿ, ಹೊಸ ಕೃಷಿ ಪದ್ಧತಿ ಬಳಕೆಯಲ್ಲಿವೆ, ಕೃಷಿ ಕಾರ್ಮಿಕರ ಅಲಭ್ಯತೆ.

4. ಈ ಹಿಂದೆ ಮಲೆನಾಡಿನಲ್ಲಿ ಸಾಮಾನ್ಯವಾಗಿ ಬೆಳೆಯಲ್ಪಡುತ್ತಿದ್ದ ಬೆಳೆಗಳು ಯಾವುವು?

ಉ. ಅಡಿಕೆ, ಮೆಣಸು, ಏಲಕ್ಕಿ, ಗದ್ದೆಸೌತೆ, ಬಾಳೆ, ಹುರುಳಿ

5. ಇಂದು ಮಲೆನಾಡಿನಲ್ಲಿ ಬೆಳೆಯಲ್ಪಡುತ್ತಿರುವ ಬೆಳೆಗಳು ಯಾವುವು?

ಉ. ಅಡಿಕೆ, ವೆನಿಲ್ಲಾ, ಶುಂಠಿ, ರಬ್ಬರ್, ಮನೆಪೂರ್ತಕ್ಕೆ ತೆಂಗು

6. ಬದಲಾವಣೆಗೆ ಕಾರಣಗಳು ಯಾವುವು?

ಉ. ಹೆಚ್ಚು ಲಾಭ ಬರುವುದೆಂದು ವೆನಿಲ್ಲಾ ಬೆಳೆಸಿದರು. ಕೇರಳಾದವರು ಬಂದು ಸರ್ಕಾರದ ಅನುಮತಿಯಿಂದ ಕಾಡಿನಲ್ಲಿ ಶುಂಠಿ ಬೆಳೆಯುತ್ತಿದ್ದರು. ಲಾಭದಾಯಕವಾದ್ದದ್ದರಿಂದ ಸ್ಥಳೀಯರು ಆರಂಭಿಸಿದರು.

7. ಈ ಹಿಂದೆ ಮಲೆನಾಡಿನಲ್ಲಿದ್ದ ಭತ್ತದ ತಳಿಗಳು ಯಾವುವು?

ಉ. ಅಸುಡಿ, ವಾಳ್ಯ, ದಪ್ಪ ಭತ್ತ, ಸಣ್ಣ

8. ಇಂದು ಕಂಡು ಬರುವ ಭತ್ತದ ತಳಿಗಳು ಯಾವುವು? ಬದಲಾವಣೆಗೆ ಕಾರಣ.

ಉ. ಇಂಟನ್, ಜಯ, ಇತ್ಯಾದಿ ಕಂಪನಿ ಭತ್ತಗಳು.

9. ಹಿಂದೆ ಮಲೆನಾಡಿನ ಕೃಷಿಕರು ಅವಲಂಬಿಸಿದ್ದ ಇತರ ಉಪಕಸುಬುಗಳು ಯಾವುವು?
ಉ. ಕೋಳಿ, ಹಂದಿ, ದನಗಳ ಸಾಕಾಣಿಕೆ. ತೋಟದ ಬೇಲಿ ಸಾಲಿನಲ್ಲಿ ದೊರೆಯುವ ಜೀರ್ಕ, ವಾಟೆಹುಳಿ, ಸೀಗೆ, ಅಂಟುವಾಳಗಳ ಸಂಗ್ರಹಣ ಗೊಬ್ಬರ ಹೊರಲು ಹೆಡಿಗೆಗಳ ತಯಾರಿಕೆ, ಬಾಳೆಯ ನಾರಿನ ಹಗ್ಗ, ಚಾಪೆ ತಯಾರಿಸುತ್ತಿದ್ದರು.

10. ಈಗ ಕಂಡು ಬರುತ್ತಿರುವ ಉಪಕಸುಬುಗಳು ಯಾವುವು?
ಉ. ಪ್ರಾಣಿಗಳನ್ನು ಸಾಕುವುದು ಕಡಿಮೆಯಾಗಿದೆ. ಇತರ ವಸ್ತುಗಳನ್ನು ಯಾರು ತಯಾರಿಸುತ್ತಿಲ್ಲ ಕಡಿಮೆ ಬೆಲೆಗೆ ಪ್ಲಾಸ್ಟಿಕ್‌ನ ಬುಟ್ಟಿ, ಹಗ್ಗ ಇತ್ಯಾದಿಗಳು ಲಭ್ಯವಿದೆ. ಹಾಡ್ಯದಲ್ಲಿ ದೊರೆಯುತ್ತಿದ್ದ ಹುಳಿ ಹಣ್ಣುಗಳ ಸಂಗ್ರಹಣೆ ಕಡಿಮೆಯಾಗಿದೆ.

11. ಆ ದಿನಗಳಲ್ಲಿ ಗದ್ದೆಗಳಲ್ಲಿ ದೊರಕುತ್ತಿದ್ದ ಮೀನು, ಏಡಿಗಳ ಬಗ್ಗೆ ತಿಳಿಸಿ.
ಉ. ಹೆಚ್ಚಿನ ಮೀನು ಏಡಿಗಳು ಗದ್ದೆಯಲ್ಲಿ ದೊರಕುತ್ತಿದ್ದವು.

12. ಕಾರಣ ಏನು?
ಉ. ಈಗ ಕಡಿಮೆಯಾಗಿವೆ. ಕೃಷಿಯಲ್ಲಿ ರಸಾಯನಿಕಗಳ ಬಳಕೆ, ಕಡಿಮೆ ಮಳೆ

13. ಹಿಂದೆ ಮಲೆನಾಡಿನಲ್ಲಿದ್ದ ಕಾಡಿನ ಬಗ್ಗೆ ತಿಳಿಸಿ.
ಉ. ಕಾಡು ಭಯಂಕರವಾಗಿತ್ತು, ಕಾಡು ಪ್ರಾಣಿಗಳು ಬಹಳ ಇದ್ದವು. ಹಲವಾರು ಹುಲಿ, ಚಿರತೆ, ನವಿಲು, ಕಾಡೆಮ್ಮೆ, ಕಾಡು ಕುರಿ, ಮೊಲ, ಪಕ್ಷಿಗಳು.

14. ಈಗ ಇರುವ ಕಾಡಿನ ಬಗ್ಗೆ ತಿಳಿಸಿ.
ಉ. ಈಗ ಕಾಡು ಬಹುತೇಕ ನಾಶವಾಗಿದೆ. ಕಾಡುಪ್ರಾಣಿಗಳ ಸಂಖ್ಯೆ ಕಡಿಮೆಯಾಗಿದೆ. ಹುಲಿಯಂತೂ ಇಲ್ಲಿ ಕಂಡುಬರುವುದಿಲ್ಲ.

ಸಂದರ್ಶನ - 2



ಹೆಸರು : ಪುಟ್ಟಯ್ಯ
ವಯಸ್ಸು ; 70
ವೃತ್ತಿ : ಕೂಲಿ ಕೆಲಸ, ಫಾರೆಸ್ಟ್ ಗೈಡ್
ಸ್ಥಳ : ಕುಪ್ಪಳಿ

1. ಈಹಿಂದೆ ಮಲೆನಾಡಿನಲ್ಲಿ ಅನುಸರಿಸಲಾಗುತ್ತಿದ್ದ ಕೃಷಿ ಪದ್ಧತಿ ಹೇಗಿತ್ತು?
ಉ. ಹಿಂದೆ ಗದ್ದೆಗಳಲ್ಲಿ, ತೋಟಗಳಲ್ಲಿ ಬಹಳ ಕೆಲಸವಿರುತ್ತಿತ್ತು. ಮುಂಗಾರು ಆರಂಭವಾಗುವ ಮೊದಲು ಹೊಲಗದ್ದೆಗಳನ್ನು ಹಸನು ಮಾಡಲು ಎತ್ತು, ಕೋಣಗಳ ಬಳಕೆ ಮಾಡುತ್ತಿದ್ದರು.

2. ಈಗ ಇರುವ ಕೃಷಿ ಪದ್ಧತಿ.
ಉ. ಕೃಷಿಯಲ್ಲಿ ಕೆಲಸ ಕಡಿಮೆಯಾಗಿದೆ. ಮಳೆ ಕಡಿಮೆಯಾಗಿದೆ. ಹೊಸ ವಿಧಧ ಬೆಳೆಗಳು ಬಂದಿವೆ. ಅವುಗಳಿಗೆ ಅಷ್ಟು ಕೆಲಸಮಾಡಬೇಕಾದ ಅವಶ್ಯಕತೆ ಇಲ್ಲ.

3. ಬದಲಾವಣೆಗೆ ಕಾರಣಗಳು.



ಉ. ಹೆಚ್ಚು ಲಾಭ ದೊರೆಯುವ ಬೆಳೆಗಳನ್ನು ಬೆಳಸಲಾಗುತ್ತಿದೆ.

4. ಈ ಹಿಂದೆ ಮಲೆನಾಡಿನಲ್ಲಿ ಸಾಮಾನ್ಯವಾಗಿ ಬೆಳೆಯಲ್ಪಡುತ್ತಿದ್ದ ಬೆಳೆಗಳು ಯಾವುವು?
ಉ. ಅಡಿಕೆ, ಭತ್ತ, ಬಾಳೆ, ಏಲಕ್ಕಿ, ಕಾಫಿ, ಹುರುಳಿ, ಗದ್ದೆ ಸೌತೆ

5. ಇಂದು ಮಲೆನಾಡಿನಲ್ಲಿ ಬೆಳೆಯಲ್ಪಡುತ್ತಿರುವ ಬೆಳೆಗಳು ಯಾವುವು?
ಉ. ರಬ್ಬರ್, ಶುಂಠಿ, ಮೆಣಸು, ವೆನಿಲ್ಲಾ, ಭತ್ತ

6. ಬದಲಾವಣೆಗೆ ಕಾರಣಗಳು ಯಾವುವು?
ಉ. ಹೊಸ ಬೆಳೆಗಳು ಅಧಿಕ ಲಾಭ ತಂದು ಕೊಡುತ್ತವೆ.

7. ಈ ಹಿಂದೆ ಮಲೆನಾಡಿನಲ್ಲಿದ್ದ ಭತ್ತದ ತಳಿಗಳು ಯಾವುವು?
ಉ. ಹೆಗ್ಗೆ, ಜೋಳಗ, ಕೊಯಮತ್ತೂರು, ಅಸುಡಿ, ಪುಟ್ಟಸಣ್ಣ, ಕರಿದಡಿ

8. ಇಂದು ಕಂಡು ಬರುವ ಭತ್ತದ ತಳಿಗಳು ಯಾವುವು? ಬದಲಾವಣೆಗೆ ಕಾರಣ.
ಉ. ಈ ತಳಿಗಳು ಇಂದು ಇಲ್ಲ ಕಂಪನಿಯವರು ಮಾರುವ ಬೀಜಗಳನ್ನು ಬೆಳೆಸುತ್ತಿದ್ದಾರೆ. ಹಿಂದೆ ಬೆಳೆಯುತ್ತಿದ್ದ ತಳಿಗಳು ಅವುಗಳ ಅನ್ನ ತುಂಬಾ ರುಚಿಕರವಾಗಿತ್ತು. ಸೊಪ್ಪಿನ ಗೊಬ್ಬರ, ಸಗಣಿ ಗೊಬ್ಬರ ಬಳಸುತ್ತಿದ್ದರು. ಬೆಳೆಯಲು ತುಂಬಾ ಸಮಯ ತೆಗೆದುಕೊಳ್ಳುತ್ತಿದ್ದ ಈ ತಳಿಗಳು ತುಂಬಾ

ಎತ್ತರ ಬೆಳೆಯುತ್ತಿದ್ದವು. ಈಗ ಕಂಡು ಬರುವ ತಳಿಗಳು ಗಿಡ್ಡವಾಗಿವೆ. ಬೇಗ ಫಸಲು ಕೊಡುತ್ತವೆ. ಇವುಗಳನ್ನು ರಾಸಾಯನಿಕ ಗೊಬ್ಬರ, ಕೀಟನಾಶಕ ಹಾಕಿ ಬೆಳೆಸಲಾಗುತ್ತದೆ.

9. ಹಿಂದೆ ಮಲೆನಾಡಿನ ಕೃಷಿಕರು ಅವಲಂಬಿಸಿದ್ದ ಇತರ ಉಪಕಸುಬುಗಳು ಯಾವುವು?
ಉ. ಕೋಳಿ ಸಾಕಾಣಿಕೆ, ಪ್ರಾಣಿ ಸಾಕಾಣಿಕೆ, ಬುಟ್ಟಿ ಹೆಣೆಗೆ, ಹಣ್ಣುಗಳ ಸಂಗ್ರಹಣೆ

10 ಈಗ ಕಂಡು ಬರುತ್ತಿರುವ ಉಪಕಸುಬುಗಳು ಯಾವುವು?
ಉ. ಸಾಕುಪ್ರಾಣಿಗಳನ್ನು ಸಾಕುವವರ ಸಂಖ್ಯೆ ಮಲೆನಾಡಿನಲ್ಲಿ ಕಡಿಮೆಯಾಗಿದೆ.

11. ಆ ದಿನಗಳಲ್ಲಿ ಗದ್ದೆಗಳಲ್ಲಿ ದೊರಕುತ್ತಿದ್ದ ಮೀನು, ಏಡಿಗಳ ಬಗ್ಗೆ ತಿಳಿಸಿ.
ಉ. ಆ ದಿನಗಳಲ್ಲಿ ಗದ್ದೆಗಳಲ್ಲಿ ಮೀನು, ಏಡಿಗಳು ತುಂಬಾ ಹೇರಳವಾಗಿ ದೊರೆಯುತ್ತಿದ್ದವು. ಬುಟ್ಟಿಗಳಲ್ಲಿ ತುಂಬಿ ತುಂಬಿ ಸಾಕಾಗುತ್ತಿತ್ತು. ಈಗ ಕಡಿಮೆಯಾಗಿದೆ.

12. ಕಾರಣ ಏನು?
ಉ. ಈಗ ಆ ದಿನಗಳಲ್ಲಿ ದೊರೆಯುತ್ತಿದ್ದಂತೆ ಮೀನುಗಳು ಗದ್ದೆಗಳಲ್ಲಿ ಕಂಡು ಬರುವುದಿಲ್ಲ. ಕೆಲವೊಮ್ಮೆ ಇಲ್ಲವೆಂದೇ ಹೇಳಬಹುದು. ರಸಾಯನಿಕ ಗೊಬ್ಬರ, ಕೀಟನಾಶಕಗಳ ಬಳಕೆಯೇ ಅವುಗಳ ಸಂಖ್ಯೆ ಕಡಿಮೆಯಾಗಲು ಕಾರಣ.

13. ಹಿಂದೆ ಮಲೆನಾಡಿನಲ್ಲಿದ್ದ ಕಾಡಿನ ಬಗ್ಗೆ ತಿಳಿಸಿ.
ಉ. ತುಂಬಾ ದಟ್ಟವಾಗಿತ್ತು. ರಸ್ತೆಗಳಿರಲಿಲ್ಲ, ಕಾಡುಪ್ರಾಣಿಗಳು ಬಹಳ ಇದ್ದವು. ಹುಲಿ ಇತ್ತು.

14. ಈಗ ಇರುವ ಕಾಡಿನ ಬಗ್ಗೆ ತಿಳಿಸಿ.
ಉ. ಕಾಡು ಕಡಿಮೆಯಾಗಿದೆ. ಹುಲಿ ಕಂಡು ಬರುವುದಿಲ್ಲ.

## ಸಂದರ್ಶನ - 3

ಹೆಸರು : ಸುಮಿತ್ರಾ, ಗಿರಿಯಪ್ಪಗೌಡ
ವಯಸ್ಸು : 30 ವರ್ಷ
ವೃತ್ತಿ : ಕೂಲಿ

1. ಈಹಿಂದೆ ಮಲೆನಾಡಿನಲ್ಲಿ ಅನುಸರಿಸಲಾಗುತ್ತಿದ್ದ ಕೃಷಿ ಪದ್ಧತಿ ಹೇಗಿತ್ತು?
ಉ. ಗದ್ದೆಗಳನ್ನು ಎತ್ತು, ಕೋಣಗಳ ಸಹಾಯದಿಂದ ಉಳುಮೆ ಮಾಡಿ ಬಿತ್ತುತ್ತಿದ್ದರು. ತೋಟಗಳಲ್ಲಿ ಕಳೆ ಕೀಳುತ್ತಿದ್ದರು. ಬೆಳೆಯ ಪೈರನ್ನು ಕೊಯ್ಯುತ್ತಿದ್ದರು. ಬೆಳೆಗಳಿಗೆ ತಗಲುವ ರೋಗ ಕಡಿಮೆ ಇತ್ತು.

2. ಈಗ ಇರುವ ಕೃಷಿ ಪದ್ಧತಿ.
ಉ. ಈಗ ಉಳುಮೆ ಮಾಡಲು ಪವರ್ ಟಿಲ್ಲರ್ ಬಳಕೆಗೆ ಬಂದಿವೆ. ಪೈರನ್ನು ಸಹ ಯಂತ್ರಗಳು ಕತ್ತರಿಸುತ್ತವೆ. ಮನುಷ್ಯರು ಮಾಡುವ ಕೆಲಸ ಯಂತ್ರಗಳೆ ಮಾಡುತ್ತಿವೆ. ಬೆಳೆಗಳ ರೋಗ ಹತೋಟಿಗೆ ರಸಾಯನಿಕಗಳ ಸಿಂಪಡಿಸುವಿಕೆ.

3. ಬದಲಾವಣೆಗೆ ಕಾರಣಗಳು.
ಉ. ಕೃಷಿ ಕೆಲಸಗಳು ಬೇಗ ಸಾಗುತ್ತವೆ.

4. ಈ ಹಿಂದೆ ಮಲೆನಾಡಿನಲ್ಲಿ ಸಾಮಾನ್ಯವಾಗಿ ಬೆಳೆಯಲ್ಪಡುತ್ತಿದ್ದ ಬೆಳೆಗಳು ಯಾವುವು?
ಉ. ಅಡಿಕೆ, ಭತ್ತ, ಬಾಳೆ, ಏಲಕ್ಕಿ, ಮೆಣಸುಗಳನ್ನು ಈ ಹಿಂದೆ ಬೆಳೆಯುತ್ತಿದ್ದರು.

5. ಇಂದು ಮಲೆನಾಡಿನಲ್ಲಿ ಬೆಳೆಯಲ್ಪಡುತ್ತಿರುವ ಬೆಳೆಗಳು ಯಾವುವು?
ಉ. ಅಡಿಕೆ, ಶುಂಠಿ, ರಬ್ಬರ್, ಭತ್ತ, ಬಾಳೆ, ಗೇರು, ವೆನಿಲ್ಲಾ

6. ಬದಲಾವಣೆಗೆ ಕಾರಣಗಳು ಯಾವುವು?
ಉ. ಹೆಚ್ಚು ಹಣ ದೊರೆಯುವುದರಿಂದ ಈ ಬೆಳೆಗಳನ್ನು ಬೆಳೆಸಲಾಗುತ್ತದೆ.

7. ಈ ಹಿಂದೆ ಮಲೆನಾಡಿನಲ್ಲಿದ್ದ ಭತ್ತದ ತಳಿಗಳು ಯಾವುವು?
ಉ. ವಾಳ್ಯ, ಜೋಳಗಿ ಭತ್ತ, ಬೆಟಸಣ್ಣ, ದಪ್ಪ ಭತ್ತ.

8. [illegible]ಂದು ಕಂಡು ಬರು[illegible] ಯಾವುವು? [illegible].
ಉ. ಕೋಳಿ ಸಾಕಾಣಿಕೆ, ಮೇಕೆ ಸಾಕಾಣಿಕೆ, ಹೈನುಗಾರಿಕೆ ಬುಟ್ಟಿಗಳ ಹೆಣಿಗೆ ಎತ್ತುಗಳನ್ನು ಕಟ್ಟುವ ಹಗ್ಗವನ್ನು ಹೊಸೆಯುತ್ತಿದ್ದರು.

9. [illegible]ಂದು ಮಲೆನಾಡಿನ ಕೃಷಿಕರು ಅವಲಂಬಿಸಿ[illegible] ಉಪಕಸುಬುಗಳು ಯಾವುವು?
ಉ. ಕೆಲವರು ಮಾತ್ರ, ಕೋಳಿ, ಮೇಕೆ, ದನಕರು ಹೊಂದಿದ್ದಾರೆ. ಈಗ ಬುಟ್ಟಿ ಹೆಣಿಗೆ ಹಗ್ಗ ಹೊಸೆಯುವುದಿಲ್ಲ.

10. ಆ ದಿನಗಳಲ್ಲಿ ಗದ್ದೆಗಳಲ್ಲಿ ದೊರಕುತ್ತಿದ್ದ ಮೀನು, ಏಡಿಗಳ ಬಗ್ಗೆ ತಿಳಿಸಿ.

ಉ. ಮುಂಗಾರುಮಳೆ ಆರಂಭವಾದಾಗ ಗದ್ದೆಯ ಮಳೆನೀರಿನಲ್ಲಿ ಕಂಡು ಬರುತ್ತಿದ್ದವು. ನಾವು ಚಿಕ್ಕವರಿದ್ದಾಗ ಕಂಡು ಬಂದಷ್ಟು ಮೀನು, ಏಡಿಗಳು ಈಗ ಕಂಡು ಬರುವುದಿಲ್ಲ.

11 ಕಾರಣ ಏನು?

ಉ. ಗೊತ್ತಿಲ್ಲ

12. ಹಿಂದೆ ಮಲೆನಾಡಿನಲ್ಲಿದ್ದ ಕಾಡಿನ ಬಗ್ಗೆ ತಿಳಿಸಿ.

ಉ. ಕಾಡು ಬಹಳವಾಗಿತ್ತು. ಮೊದಲು ಕಾಡಿನಲ್ಲಿ ಚಲಿಸಲು ಭಯವಾಗುತ್ತಿತ್ತು. ಹುಲಿ, ಚಿರತೆ (ಕುರ್ಕ) ಬರ್ಕ, ಜಿಂಕೆ ಕಡವೆ, ನವಿಲು ಇತ್ಯಾದಿ ಪ್ರಾಣಿಗಳಿವೆ.

13. ಈಗ ಇರುವ ಕಾಡಿನ ಬಗ್ಗೆ ತಿಳಿಸಿ.

ಉ. ರಸ್ತೆ ನಿರ್ಮಿಸಲು, ಕಾರ್ಖಾನೆಗಳಿಗೆ ಮೂಲವಸ್ತುಗಳನ್ನು ಒದಗಿಸುವ ಸಲುವಾಗಿ ಮರಗಿಡಗಳನ್ನು ಕಡಿಯಲಾಯಿತು.

## ಸಂದರ್ಶನ - 4

ಹೆಸರು : ಭಾಗೀರಥಿ
ವಯಸ್ಸು : 45
ವೃತ್ತಿ : ಕೂಲಿ
ಸ್ಥಳ : ಕುಪ್ಪಳಿ

1. ಈಹಿಂದೆ ಮಲೆನಾಡಿನಲ್ಲಿ ಅನುಸರಿಸಲಾಗುತ್ತಿದ್ದ ಕೃಷಿ ಪದ್ಧತಿ ಹೇಗಿತ್ತು?

ಉ. ಆಳುಗಳು ತೋಟದ ಕೆಲಸವನ್ನು ಮಾಡುತ್ತಿದ್ದರು. ಗದ್ದೆಗಳನ್ನು ಎತ್ತು, ಕೋಣಗಳ ಸಹಾಯದಿಂದ ಉಳುಮೆ ಮಾಡಿ ಬಿತ್ತುತ್ತಿದ್ದರು. ಎತ್ತಿನಗಾಡಿಗಳ ಸಹಾಯದಿಂದ ಫಸಲನ್ನು ಮನೆಗೆ ಸಾಗಿಸಲಾಗುತ್ತಿತ್ತು.

2. ಈಗ ಇರುವ ಕೃಷಿ ಪದ್ಧತಿ.

ಉ. ಈಗ ಕೃಷಿಗೆ ಯಂತ್ರಗಳನ್ನು ಬಳಸಲಾಗುತ್ತದೆ. ಕೃಷಿಯ ಎಲ್ಲಾ ಕೆಲಸಗಳನ್ನು ಯಂತ್ರಗಳೇ ಮಾಡುತ್ತವೆ. ಕೃಷಿ ಕಾರ್ಮಿಕರಿಗೆ ಕೆಲಸ ಇಲ್ಲವಾಗಿದೆ.

3. ಬದಲಾವಣೆಗೆ ಕಾರಣಗಳು.

ಉ. ಸಮಯ ಮತ್ತು ಹಣ ಕಡಿಮೆಯಾಗುತ್ತದೆ.

4. ಈ ಹಿಂದೆ ಮಲೆನಾಡಿನಲ್ಲಿ ಸಾಮಾನ್ಯವಾಗಿ ಬೆಳೆಯಲ್ಪಡುತ್ತಿದ್ದ ಬೆಳೆಗಳು ಯಾವುವು?

ಉ. ಅಡಿಕೆ, ಭತ್ತ, ಬಾಳೆ, ಏಲಕ್ಕಿ, ಹುರುಳಿ, ಗದ್ದೆಸೌತೆ, ಮೆಣಸುಗಳನ್ನು ಈ ಹಿಂದೆ ಬೆಳೆಯುತ್ತಿದ್ದರು.

5. ಇಂದು ಮಲೆನಾಡಿನಲ್ಲಿ ಬೆಳೆಯಲ್ಪಡುತ್ತಿರುವ ಬೆಳೆಗಳು ಯಾವುವು?

ಉ. ಅಡಿಕೆ, ಶುಂಠಿ, ರಬ್ಬರ್, ಭತ್ತ, ಬಾಳೆ, ಗೇರು, ವೆನಿಲ್ಲಾ

6. ಬದಲಾವಣೆಗೆ ಕಾರಣಗಳು ಯಾವುವು?

ಉ. ಲಾಭ ಹೆಚ್ಚು ದೊರೆಯುವುದರಿಂದ ಈ ಬೆಳೆಗಳನ್ನು ಬೆಳೆಸಲಾಗುತ್ತದೆ.

7. ಈ ಹಿಂದೆ ಮಲೆನಾಡಿನಲ್ಲಿದ್ದ ಭತ್ತದ ತಳಿಗಳು ಯಾವುವು?

ಉ. ವಾಳ್ಯ, ಜೋಳಗಿ ಭತ್ತ, ಬೆಟ್‌ಸಣ್ಣ, ಕೊಯಮತ್ತೂರು ಸಣ್ಣ, ದಪ್ಪ ಭತ್ತ.

8. [illegible]ಂದು ಕಂಡು ಬರು[illegible] ಯಾವುವು? [illegible]

ಉ. ಕೋಳಿ ಸಾಕಾಣಿಕೆ, ಮೇಕೆ ಸಾಕಾಣಿಕೆ, ಹೈನುಗಾರಿಕೆ ಬುಟ್ಟಿಗಳ ಹೆಣಿಗೆ ಎತ್ತುಗಳನ್ನು ಕಟ್ಟುವ ಹಗ್ಗವನ್ನು ಹೊಸೆಯುತ್ತಿದ್ದರು, ಬಿದಿರಿನಿಂದ ಮೊರೆಗಳನ್ನು ಮಾಡುತ್ತಿದ್ದರು.

9. ಹಿಂದೆ ಮಲೆನಾಡಿನ ಕೃಷಿಕರು ಅವಲಂಬಿಸಿದ್ದ ಇತರ ಉಪಕಸುಬುಗಳು ಯಾವುವು?

ಉ. ಕೆಲವರು ಮಾತ್ರ, ಕೋಳಿ, ಮೇಕೆ, ದನಕರು ಹೊಂದಿದ್ದಾರೆ. ಈಗ ಬುಟ್ಟಿ ಹೆಣಿಗೆ ಹಗ್ಗ ಹೊಸೆಯುವುದಿಲ್ಲ.

10. ಈಗ ಕಂಡು ಬರುತ್ತಿರುವ ಹಳ್ಳದ ಮತ್ತು ಮೀನುಗಳ ಬಗ್ಗೆ ತಿಳಿಸಿ.

ಉ. ಮುಂಗಾರುಮಳೆ ಆರಂಭವಾದಾಗ ಗದ್ದೆಯ ಮಳೆನೀರಿನಲ್ಲಿ ಕಂಡು ಬರುತ್ತಿದ್ದ ಹತ್ತು ಮೀನುಗಳ ಸಂಖ್ಯೆ ಇಂದು ಕಡಿಮೆಯಾಗಿದೆ.

. ಆ ದಿನಗಳಲ್ಲಿ ಗದ್ದೆಗಳಲ್ಲಿ ದೊರಕುತ್ತಿದ್ದ ಮೀನು, ಏಡಿಗಳ ಸಂಖ್ಯೆ ಕ್ಷೀಣಿಸಲು ಕಾರಣ

ಕೃಷಿಗೆ ಬಳಸಲಾಗುತ್ತಿರುವ ರಸಾಯನಿಕ ಗೊಬ್ಬರ ಮತ್ತು ಕೀಟನಾಶಕಗಳು ಮತ್ತು ಕಡಿಮೆಯಾದ ಮಳೆ.

11. ಹಿಂದೆ ಇದ್ದ ಕಾಡಿನ ಬಗ್ಗೆ ತಿಳಿಸಿ.

ಉ. ಕಾಡು ಬಹಳದಟ್ಟವಾಗಿತ್ತು. ಕಾಡಿನಲ್ಲಿ ಅನೇಕ ಕಾಡುಮೃಗಗಳು ಕಂಡು ಬರುತ್ತಿದ್ದವು. ಹಲವೊಮ್ಮೆ ತೋಟ, ಗದ್ದೆ, ಮನೆಗಳ ಹತ್ತಿರ ಹುಲಿ, ಚಿರತೆ (ಕುರ್ಕ) ಬರ್ಕ, ಜಿಂಕೆ ಕಡವೆ, ನವಿಲು ಇತ್ಯಾದಿ ಪ್ರಾಣಿಗಳು ಕಂಡುಬಂದದ್ದು ಉಂಟು.

. [illegible]

. ಗುಡ್ಡ ಬೆಟ್ಟಗಳಲ್ಲಿ ತುಂಬಾ ದಟ್ಟವಾಗಿ ಗಿಡಮರಗಳು ಬೆಳೆಯುತ್ತಿದ್ದವು. ಮಳೆಯು ಅಧಿಕವಾಗಿದ್ದು ಕಾಡಿನಲ್ಲಿ ಪ್ರಾಣಿಗಳು ಹೇರಳವಾಗಿದ್ದವು.

12. ಈಗ ಇರುವ ಕಾಡಿನ ಬಗ್ಗೆ ತಿಳಿಸಿ.

ಉ. ಈಗ ಬಹಳಷ್ಟು ಅರಣ್ಯ ಪ್ರದೇಶ ನಾಶವಾಗಿದೆ. ಅಷ್ಟಾಗಿ ಕಾಡುಪ್ರಾಣಿಗಳು ಕಂಡುಬರುವುದಿಲ್ಲ.

# ವೆನಿಲ್ಲಾ ಕೃಷಿಯ ಬಗ್ಗೆ ತಿಳಿಯಲು ನೆಡೆಸಿದ ಸಂದರ್ಶನ

ಹೆಸರು : ಡಾ. ಚಂದ್ರಪ್ಪಗೌಡ

ವಯಸ್ಸು : 78

ವೃತ್ತಿ : ನಿವೃತ್ತ ವೈದ್ಯರು, ಈಗ ಕೃಷಿ ಮಾಡುತ್ತಿದ್ದಾರೆ.

ಸ್ಥಳ : ಕುಪ್ಪಳಿ

1. ನೀವು ಬೆಳೆಯುತ್ತಿರುವ ಬೆಳೆಗಳು ಯಾವುವು?

ಉ ವೆನಿಲ್ಲಾ, ತೆಂಗು, ಮೆಣಸು, ಭತ್ತ ಆದರೆ ಈಗ ವೆನಿಲ್ಲಾ ಮಾತ್ರ ಬೆಳೆಯುತ್ತೀವಿ.

2. ವೆನಿಲ್ಲಾ ಬೆಳೆಯಲು ಕಾರಣ?

ಉ. ಉತ್ತಮ ಬೆಲೆ ದೊರಕುತ್ತಿತ್ತು.

3. ಈಗ ಅದು ಲಾಭದಾಯಕವೇ?

ಉ. ಇಲ್ಲ ಹಿಂದೆಲ್ಲಾ ಕೆ.ಜಿಗೆ 3,000 ರೂಪಾಯಿ ಇದ್ದದ್ದು ಈಗ 60 ರೂಪಾಯಿಗೆ ಇಳಿದಿದೆ.

4. ಕಾರಣವೇನು?

ಉ. ಮಾರುಕಟ್ಟೆ ಕುಸಿತ, ಅಧಿಕ ಉತ್ಪಾದನೆ, ಮಡಗಾಸ್ಕರ್‌ನಿಂದ ಅಂತರಾಷ್ಟ್ರೀಯ ಮಾರುಕಟ್ಟೆಗೆ ಬರುವ ವೆನಿಲ್ಲಾ, ಕೃತಕ ವೆನಿಲ್ಲಾ ಸ್ವಾದ ಇತ್ಯಾದಿ.

5. ರಸಾಯನಿಕಗಳನ್ನು ವೆನಿಲ್ಲಾ ಬೆಳೆಯಲು ಬಳಸಲಾಗುತ್ತಿದೆಯೇ?

ಉ. ವೈರಸ್ ಕ್ಕಾಯಿಲೆಗಳು, ಫಂಗಸ್‌ಗಳು, ಶಂಕುಹುಳುಗಳಿಂದ ಇಳುವರಿ ಕಡಿಮೆಯಾಗುತ್ತದೆ. ಅದಕ್ಕಾಗಿ ಕಾಪರ್ ಸಲ್ಫೇಟ್ ಇತ್ಯಾದಿಗಳನ್ನು ಬಳಸಲಾಗುತ್ತಿದೆ.

6. ವೆನಿಲ್ಲಾ ಬಗ್ಗೆ ಇತರ ಮಾಹಿತಿ.

ಉ. ವೆನಿಲ್ಲಾ ಬೆಳೆಗೆ ಕೃತಕ ಪರಾಗಸ್ಪರ್ಶ ಮಾಡಬೇಕು. ಆ ದಿನ ಅರಳಿದ ಹೂವು ಅಂದೇ ಫಲವತ್ತಾಗಬೇಕು. ವೆನಿಲ್ಲಾ ಸ್ವಾದವನ್ನು ಮಲೆನಾಡಿನಲ್ಲೇ ತಯಾರಿಸುವಂತಾದರೆ ಬಂಡವಾಳಶಾಹಿಗಳಿಂದ, ಮಧ್ಯವರ್ತಿಗಳಿಂದ, ದಾಳಿಯಿಂದ ಮುಕ್ತಿ ಹೊಂದಿ ರೈತರು ಅಧಿಕ ಲಾಭ ಪಡೆಯಬಹುದು.

ಸಂದರ್ಶನದಲ್ಲಿ ಕಂಡು ಬಂದ ಅಂಶಗಳಿಂದ ಮಲೆನಾಡಿನ ಕೃಷಿ ತನ್ನ ಮೂಲ ಸ್ವರೂಪವನ್ನು ಕಳೆದುಕೊಳ್ಳುತ್ತಿರುವ ಇಂದಿನ ದಿನಗಳಲ್ಲಿ ಪರಿಸರ ಮಾಲಿನ್ಯವನ್ನು ಸಹ ಹುಟ್ಟು ಹಾಕುತ್ತಿದೆ. ಕೃಷಿಯಲ್ಲಿ ಮಿತಿ ಮೀರಿದ ರಸಾಯನಿಕಗಳ ಮತ್ತು ಕೀಟನಾಶಕಗಳ ಬಳಕೆ ನವೀನ ಕೃಷಿ ಪದ್ಧತಿಗಳಿಂದಾಗಿ ಮಲೆನಾಡಿನಲ್ಲಿ ಅನೇಕ ಪರಿಸರ ಸಂಬಂಧಿ ಸಮಸ್ಯೆಗಳು ತಲೆದೂರಿವೆ. ಈ ಕೃಷಿ ವಿಧಾನದಿಂದ ಅನೇಕ ಪ್ರಾಣಿ ಪಕ್ಷಿ ಸಂತತಿಯೂ ನಶಿಸುತ್ತಿದೆ.

ಮುಂಗಾರು ಪ್ರಾರಂಭವಾಗುವಾಗ ಮೇ ತಿಂಗಳಿನಲ್ಲಿ ಸಂಪ್ರಾದಾಯಕವಾದ ಭತ್ತದ ಕೃಷಿ ಆರಂಭಿಸಲು ಗದ್ದೆಯನ್ನು ಹದಗೊಳಿಸಿ, ಬೀಜವನ್ನು ಬಿತ್ತುತ್ತಿದ್ದರು. ಈ ಗದ್ದೆನ್ನು ``ಅಗೇಡಿ`` ಎಂದು ಕರೆಯುತ್ತಿದ್ದರು. ಹೀಗೆ ಭತ್ತದ ಸಸಿಗಳನ್ನು ಬೆಳೆಸಲು ಸಂಪ್ರಾದಾಯಕವಾದ ಕೃಷಿ ಪದ್ಧತಿಗಳನ್ನೇ ಅನುಸರಿಸುತ್ತಿದ್ದರು. ತಲಾ-ತಲಾಂತರದಿಮದ ಬಂದ ಭತ್ತದ ತಳಿಯ ಬೀಜಗಳನ್ನೇ ಬಳಸುತ್ತಿದ್ದರು. ಹಿಂದಿನ ಸಾಲಿನ ಫಸಲಿನಿಂದ ರೈತರು ``ಬೀಜದ ಭತ್ತ`` ಎಂದು ಉತ್ತಮ ಇಳುವರಿಯ ಬೀಜಗಳನ್ನು ಪ್ರತ್ಯೇಕವಾಗಿ ಸಂರಕ್ಷಿಸಿ ಇಟ್ಟು ಕೊಳ್ಳುತ್ತಿದ್ದರು. ಮುಂಗಾರು ಆರಂಭವಾದಾಗ ಈ ಬೀಜಗಳಿಂದ ಹೊಸ ಸಸಿಗಳನ್ನು ಬೆಳಸುತ್ತಿದ್ದರು. ಈ ಸಸಿಗಳು ಒಂದು ತಿಂಗಳಿನ ಅವಧಿಯಲ್ಲಿನ ನಿರ್ದಿಷ್ಟ ಎತ್ತರಕ್ಕೆ ಬೆಳೆದ ನಂತರ ಅವುಗಳನ್ನು ಕಿತ್ತು ಸಾವಯವ ಗೊಬ್ಬರವನ್ನು ಹಾಕಿ, ಉಳುಮೆ ಮಾಡಿ ನೀರು ಕಟ್ಟಿ ಸಿದ್ಧ ಮಾಡಿದ ಗದ್ದೆಗಳಲ್ಲಿ ನಾಟಿ ಮಾಡುತ್ತಿದ್ದರು. ಈ ಸಂಪ್ರಾದಾಯಕ ಭತ್ತದ ತಳಿಗಳು ರೋಗ ನಿರೋಧಕ ಶಕ್ತಿಯನ್ನು ಹೊಂದಿದ್ದವು. ಮಲೆನಾಡಿನ ಮಳೆಯನ್ನು ಪ್ರತಿರೋಧದ ವಾತಾವರಣವನ್ನು ಎದುರಿಸಿ ಬೆಳೆಯುವ ಶಕ್ತಿ ಇವುಗಳಿಗಿತ್ತು.

ಸಾಮಾನ್ಯವಾಗಿ 4-5 ದಶಕಗಳ ಹಿಂದಿನವರೆಗೆ ಮಲೆನಾಡಿನ ರೈತರು ಬೆಳೆಯುತ್ತಿದ್ದ ಭತ್ತದ ತಳಿಗಳೆಂದರೆ, `ಅಸೂಡಿ` ರತ್ನಚೂಡಿ`, ಕೊಯಮತ್ತೂರು, ಸಣ್ಣ, ಬಂಗಾರಕಡ್ಡಿ, ಸಣ್ಣಒಳ್ಳೆ, ಗಂಧಸಾಲೆ ಮುಂತಾದವು.

60 ರ ದಶಕದಲ್ಲಿ `ಹಸಿರುಕ್ರಾಂತಿ` ಯ ಹೆಸರಿನಲ್ಲಿ ಅಲ್ಪಾವಧಿಯ ಭತ್ತದ ತಳಿಗಳು ಮಲೆನಾಡಿಗೆ ಕಾಲಿಟ್ಟವು. ಪಾರಂಪರಿಕ ಕೃಷಿಯಲ್ಲಿ ಅಕ್ಟೋಬರ್, ನವೆಂಬರ್‌ನಲ್ಲಿ ಭತ್ತದ ಬೆಳೆಯನ್ನು ಕೊಯ್ಲು ಮಾಡಿದ ನಂತರ ಗದ್ದೆಗಳು ಮುಂಗಾರು ಮಳೆ ಪ್ರಾರಂಭವಾಗುವರೆಗೆ ಖಾಲಿಯಾಗಿರುತ್ತಿದ್ದವು. ಕೆಲವು ಗದ್ದೆಗಳಲ್ಲಿ ಬೇಸಿಗೆಯಲ್ಲಿ ಕಡಲೆ, ಹುರುಳಿ, ಧಾನ್ಯಗಳನ್ನು ತರಕಾರಿಗಳನ್ನು ಬೆಳೆಯುತ್ತಿದ್ದುದರಿಂದ ಅವುಗಳ ಫಲವತ್ತತೆ ಹೆಚ್ಚುತ್ತಿತ್ತು. ಆದರೆ ಹೈಬ್ರೀಡ್ ಭತ್ತದ ತಳಿಗಳಿಂದಾಗಿ ವರ್ಷದಲ್ಲಿ 2 ಸಲ ಭತ್ತ ಬೆಳೆಯುವ ಕ್ರಮದಿಂದಾಗಿ ರಾಸಾಯನಿಕ ಗೊಬ್ಬರಗಳನ್ನು ಕೀಟನಾಶಕಗಳನ್ನು ಅನಿವಾರ್ಯವಾಗಿ ರೈತರು ಬಳಸಿದರು. ಇದರಿಂದಾಗಿ ಭೂಮಿಯ ಫಲವತ್ತತೆ ಕಡಿಮೆಯಾಗಿ, ಇಳುವರಿಯೂ ಕಡಿಮೆಯಾಯಿತು. ಕೀಟನಾಶಕಗಳ ಬಳಕೆಯಿಂದಾಗಿ ಉಪಯುಕ್ತ ಪ್ರಾಣಿಗಳಾದ ಕಪ್ಪೆ, ಏಡಿಗಳು ನಾಶವಾಗಿದ್ದರಿಂದ ಕೀಟಗಳ ಸಂಖ್ಯೆ ಹೆಚ್ಚಿ ಬೆಳೆಗೆ ರೋಗ ಬಂದಿದ್ದರಿಂದ ಹೆಚ್ಚು ಹೆಚ್ಚು ಕೀಟನಾಶಕಗಳನ್ನು ಬಳಸುವುದು ಅನಿವಾರ್ಯವಾಯಿತು.

ಇದೊಂದು ವಿಷವರ್ತುಲ ಇದೆಲ್ಲದರ ಫಲವಾಗಿ ಭತ್ತದ ಗದ್ದೆಗಳು ನಿಸ್ಸಾರವಾಗಿ ಭತ್ತ ಬೆಳೆಯುವುದು ಆರ್ಥಿಕವಾಗಿ ಲಾಭದಾಯಕವಲ್ಲ ಎಂಬ ಭಾವನೆ ರೈತರಲ್ಲಿ ಮೂಡಿತು. ಕೃಷಿ ಕಾರ್ಮಿಕರ ಜೀವನದಲ್ಲೂ ಬದಲಾವಣೆಯಾಗಿ ವಿದ್ಯಾವಂತರಾದ ಕೃಷಿ ಕಾರ್ಮಿಕರ ಮಕ್ಕಳು ಬೇರೆ ಉದ್ಯೋಗಗಳನ್ನು ಹುಡುಕಿಕೊಂಡು ನಗರಗಳಿಗೆ ವಲಸೆ ಹೋದರು. ಇದರಿಂದಾಗಿ ಭತ್ತದ ಕೃಷಿಗೆ

ಅಗತ್ಯವಾದ ಮನುಷ್ಯ ಶಕ್ತಿ ಲಭ್ಯವಾಗದೇ ರೈತರು ಲಾಭದಾಯಕವಾದ ವಾಣಿಜ್ಯ ಬೆಳೆಗಳ ಕಡೆಗೆ ಗಮನ ಹರಿಸಿದರು. ನೀರಿರುವ ಗದ್ದೆಗಳು ಅಡಿಕೆ ತೋಟಗಳಾಗಿ ಪರಿವರ್ತಿಸಿದರು. ಕಬ್ಬಿನ ಬೆಳೆ ಮಲೆನಾಡಿನಿಂದ ಕಾಲ್ತೆಗೆಯಿತು.

ಅದರ ಬದಲು ಶುಂಠಿ ಬೆಳೆ, ವೆನಿಲ್ಲಾ ಮತ್ತು ರಬ್ಬರ್ ಕೃಷಿಗಳು ಮಲೆನಾಡಿಗೆ ಕಾಲಿರಿಸಿದವು. ಆದರೆ ಶುಂಠಿ ಕೃಷಿಯು ಅಪಾರ ಪ್ರಮಾಣದ ರಸಾಯನಿಕಗಳ ಬಳಕೆಯಿಂದಾಗಿ ಮಣ್ಣು ಮತ್ತು ನೀರು ಎರಡನ್ನು ಕಲುಷಿತಗೊಳಿಸಿತು. ವೆನಿಲ್ಲಾ ಬೆಳೆಯಲು ಖರ್ಚು ಮಾಡಿದ ಹಣವನ್ನು ಕೂಡ ರೈತನಿಗೆ ಮರಳಿ ತಂದು ಕೊಡಲು ಸಾಧ್ಯವಾಗಲಿಲ್ಲ. ಫಲವತ್ತಾದ ಕಾಡಿನ ಮರಗಳಿರುವ ಪ್ರದೇಶದಲ್ಲಿ ಮರಗಳನ್ನು ಕಡಿದು ರಬ್ಬರ್ ಕೃಷಿಯನ್ನು ಮಾಡಿದ್ದರಿಂದ ವ್ಯಾಪಕವಾದ ಅರಣ್ಯ ನಾಶವಾಯಿತು. ಹೊಸನಗರ, ಸಾಗರ, ತೀರ್ಥಹಳ್ಳಿಯ ಅನೇಕ ಗುಡ್ಡ ಬೆಟ್ಟಗಳು ಅರಣ್ಯದ ಹೊದಿಕೆಯನ್ನು ಕಳೆದುಕೊಂಡು ರಬ್ಬರ್‌ನ ಮಾನೋಕೃಷಿ (ಏಕ ರೂಪಿ ಕೃಷಿ) ಅನ್ನು ಅಳವಡಿಸಿಕೊಂಡಿವೆ.

ಮಲೆನಾಡಿನಲ್ಲಿ ಕೃಷಿ ಕಾರ್ಮಿಕರ ಅಲಭ್ಯತೆಯಿಂದಾಗಿ ಭತ್ತದ ಬೇಸಾಯ ಲಾಭದಾಯಕವಲ್ಲದೆ ಇರುವುದರಿಂದ ಕೆಲವು ರೈತರು ಅಕೇಶಿಯಾದ ತೋಪುಗಳನ್ನು ಬೆಳೆಸಿರುವುದು ಆತಂಕಕಾರಿಯಾಗಿದೆ. ಅಕೇಶಿಯಾದ ಮನೊಕಲ್ಚರ್‌ನಿಂದಾಗಿ, ಅಕೇಶಿಯಾ ಬೆಳೆದ ಪರಿಸರದಲ್ಲಿ ಪ್ರಾಣಿ ಪಕ್ಷಿ ವೈವಿಧ್ಯತೆ ಕಡಿಮೆಯಾಗುತ್ತದೆ.

ಜಾಗತೀಕರಣದ ಗಾಳಿಯು ಮಲೆನಾಡಿನಾದ್ಯಂತ ಪಸರಿಸಿದೆ. ಸಣ್ಣ ರೈತರೂ ಸಹ ಈ ವಶೀಕರಣದಿಂದ ಹೊರತಾಗಿಲ್ಲ. ಒಪ್ಪಂದದ ಕೃಷಿ, ಮತ್ತು ದಳ್ಳಾಳಿಗಳ ಮೂಲಕ ಮಲೆನಾಡಿನ ನೆಲಕ್ಕೆ ಅಡಿಯಿಟ್ಟಿರುವ ಅಲಂಕಾರಿಕ ಪುಷ್ಪೋದ್ಯಮವನ್ನು ಲಾಭಕಾರಿಯೆಂದು ಬಗೆದ ಕೃಷಿಕರು ಅದರೆಡೆಗೆ ವಾಲುತ್ತಿದ್ದಾರೆ. ಪುಷ್ಪ ಕೃಷಿಗೆ ಸೂಕ್ತ ವಾತಾವರಣ ಹೊಂದಿರುವ ಮಲೆನಾಡಿನಲ್ಲಿ ಇಂದು ಸಂಪ್ರಾದಾಯ ಪುಷ್ಪಗಳ ಬದಲಿಗೆ ಅಲಂಕಾರಿಕ ಪುಷ್ಪಗಳ ಕೃಷಿ ಆರಂಭವಾಗಿದೆ. ಹೊರ ದೇಶಗಳಿಗೆ ರಫ್ತು ಮಾಡುವ ಸಲುವಾಗಿ ಬೆಳೆಸಲ್ಪಡುವ ಈ ಸುಂದರ ಪುಷ್ಪಗಳಿಗೆ ಹೊರದೇಶದ ಮಾರುಕಟ್ಟೆಯಲ್ಲಿ ಅಪಾರ ಬೇಡಿಕೆ ಇದೆ. ಅಲ್ಲಿನ ಸಭೆ ಸಮಾರಂಭಗಳಲ್ಲಿ, ಪಾರ್ಟಿಗಳಲ್ಲಿ, ಹೋಟೆಲುಗಳಲ್ಲಿ, ಚರ್ಚುಗಳಲ್ಲಿ ಪುಷ್ಪಾಲಂಕಾರಕ್ಕೆ, ಹೂ ಗುಚ್ಚಗಳಿಗೆ ಬೇಕಾಗುವ ಬಣ್ಣ ಬಣ್ಣದ ಮನಮೋಹಕ ಗುಲಾಬಿಗಳು, ಅಂದದ ಆಂತೋರಿಯಂಗಳು, ಗ್ಲಾಡಿಯೋಲಸ್‌ಗಳು, ಜರ್ಬೆರಾ, ಮನಸೂರೆಗೊಳ್ಳುವ ಆರ್ಕಿಡ್ ಪುಷ್ಪಗಳು ಇತ್ಯಾದಿ ಪುಷ್ಪಗಳನ್ನು ವಿದೇಶಿ ಮಾರುಕಟ್ಟೆಗೆ ಒದಗಿಸುವ ಅಗ್ಗದ ಸಲೆ ಮಲೆನಾಡು ಆಗತೊಡಗಿದೆ. ಅಧಿಕ ಲಾಭದ ಆಮಿಷ ತೋರಿ ಸ್ಥಳೀಯರಿಗೆ ಇವುಗಳನ್ನು ಬೆಳೆಸುವಂತೆ ಪ್ರೇರೆಪಿಸುವ ಕಂಪನಿಗಳು ಮತ್ತು ಮಧ್ಯವರ್ತಿಗಳು, ಕೊನೆಗೆ ಕೃಷಿಕರಿಂದ ಹೂವು ಕೊಳ್ಳುವಾಗ ಹಲವಾರು ನಕಾರಾತ್ಮಕ ನೆವ ಒಡ್ಡಿ ಸರಿಯಾಗಿ ಹಣ ನೀಡದಿದ್ದು ಕಂಡು ಬಂದಿದೆ.

ಆ ಪುಷ್ಪಗಳ ಬೆಳವಣಿಗೆಗೆ ಅಗತ್ಯವಾಗುವ ಬೀಜ, ರಾಸಾಯನಿಕ ಗೊಬ್ಬರ, ಕೀಟನಾಶಕಗಳು, ಶಿಲೀಂದ್ರ ನಾಶಕಗಳನ್ನು ಕಂಪನಿಯೇ ಕೃಷಿಕರಿಗೆ ಒದಗಿಸುತ್ತದೆ. ವಿದೇಶಿ ಹಣದ ಆಮಿಷದಿಂದಾಗಿ ಯಾರಿಗೋ ಎಲ್ಲೋ ಅಗತ್ಯವಿರುವ ಪುಷ್ಪಗಳ ಪೂರೈಕೆಗಾಗಿ ನಮ್ಮ ನೆಲದ ಬಳಕೆ ರೈತರನ್ನು ಸಾಂಪ್ರದಾಯಕ ಕೃಷಿಯಿಂದ ವಿಮುಖರನ್ನಾಗಿಸಿದೆ. ಆಯಾ ಋತು ಮಾನಗಳಲ್ಲಿ ಬೆಳೆಯದೆ ಇರುವ ಹಣ್ಣು, ತರಕಾರಿ ಮತ್ತು ಹೂವುಗಳನ್ನು ಕೃತಕವಾಗಿ ನಿರ್ಮಿಸಿರುವ ಹಸಿರು ಮನೆಗಳಲ್ಲಿ, ಕೃತಕ ವಾತಾವರಣ, ನೀರಿನ ಸಿಂಪರಣೆ, ರಸದೂತಗಳಾದ (Hormones) ಇಂಡೋಲ್ ಅಸಿಟಿಕ್ ಆಸಿಡ್ (IAA) ಗಿಬ್ಬರ್‌ಲಿನ್ (Gibberellins) ಗಳ ಬಳಕೆಯಿಂದ ಸಸ್ಯಗಳನ್ನು ತೀರಾ ನಿಗಾ ವಹಿಸಿ ಬೆಳೆಸುವ ಕೃಷಿ ವಿಧಾನ ಮಲೆನಾಡಿನಲ್ಲಿ ಅಲ್ಲಲ್ಲಿ ಕಂಡು ಬರುತ್ತದೆ. ಇದರೊಟ್ಟಿಗೆ ಜಾಗತಿಕ ಮಾರುಕಟ್ಟೆಗೆ ಸೌಂದರ್ಯವರ್ಧಕಗಳ (Consmetics) ತಯಾರಿಕೆಗೆ ಅಗತ್ಯ ಮೂಲ ವಸ್ತುಗಳಾದ ಪಚೋಲಿ, ಅಲ್ಯೂವೆರಾ ಇತ್ಯಾದಿ ಸಸ್ಯಗಳ ಕೃಷಿಯೂ ಮಲೆನಾಡಿನಲ್ಲಿ ಇತ್ತೀಚಿನ ದಿನಗಳಲ್ಲಿ ಆರಂಭವಾಗಿದೆ. ಮೂಲತ: ಈ ಪ್ರದೇಶದಲ್ಲಿ ಬೆಳೆಯುವ ಅಥವಾ ಬೆಳೆಯದೆ ಇರುವ ಈ ಸಸ್ಯಗಳ ಕೃಷಿಯುಂದಾಗಿ ಕೃಷಿಕರು ಸಾಂಪ್ರದಾಯಿಕ ಬೆಳೆಗಳ ಕೃಷಿಯನ್ನು ಕಡೆಗಾಣುಸುವಂತಾಗಿದೆ.

ಅಂದಿನ ಕೃಷಿ ಪದ್ಧತಿಯಲ್ಲಿ ಗದ್ದೆ ಹೂಳಲು ಎತ್ತು ಮತ್ತು ಕೋಣಗಳನ್ನು ಕೃಷಿಕರು ಬಳಸುತ್ತಿದ್ದರು. ಪಶುಪಾಲನೆಗೆ ಅದ್ಯತೆ ಅಂದಿನ ಮಲೆನಾಡಿನಲ್ಲಿತ್ತು. ಹಸು, ಎತ್ತು, ಎಮ್ಮೆ, ಕೋಣಗಳಿಂದ ಹೊಲ, ಗದ್ದೆ ಮತ್ತು ತೋಟಗಳಿಗೆ ಅಗತ್ಯವಾದಷ್ಟು ಗೊಬ್ಬರ ದೊರೆಯುತ್ತಿತ್ತು. ಸಾವಯವ ನೈಸರ್ಗಿಕ ಗೊಬ್ಬರದ ಬಳಕೆಯಿಂದ ಭೂಮಿ ಫಲವತ್ತಾಗಿತ್ತು. ಭೂಮಿಯಲ್ಲಿನ ಉಪಕಾರಿ ಕೀಟಗಳು, ಸೂಕ್ಷ್ಮಾಣು ಜೀವಿಗಳಿಗೂ ಯಾವುದೇ ತೊಂದರೆ ಇರಲಿಲ್ಲ.

ಈಗ ಎತ್ತು ಕೋಣಗಳನ್ನು ಬಳಸಿ ಭೂಮಿ ಉಳುಮೆ ಮಾಡುವ ಕ್ರಮ ವಿರಳವಾಗಿ ಬಿಟ್ಟಿದೆ. ಎತ್ತು ಕೋಣಗಳ ಬದಲಾಗಿ ಎಲ್ಲೆಡೆಯೂ ಫವರ್ ಟಿಲ್ಲರ್‌ಗಳು (Power Tiller) ಬಳಕೆಯಲ್ಲಿದೆ. ಅಲ್ಪಾವಧಿಯಲ್ಲಿ ಹೆಚ್ಚಿನ ಕಾರ್ಯ ನಿರ್ವಹಿಸುವುದರಿಂದ, ಫವರ್ ಟಿಲ್ಲರ್ ಹೊಂದಿರದ ರೈತರೂ ಕೂಡ ಅದನ್ನು ಇತರರಿಂದ ಬಾಡಿಗೆಗೆ ಕೊಂಡು ಭೂಮಿಯನ್ನು ಹೂಳುವುದು ಸಾಮಾನ್ಯವಾಗಿಬಿಟ್ಟಿದೆ. ಇದರಿಂದ ಹೊರ ಹೊಮ್ಮುವ ಹೊಗೆ ವಾಯು ಮಾಲಿನ್ಯಕ್ಕೆ ಎಡೆ ಮಾಡಿಕೊಟ್ಟಿದೆ.

ಪಶುಪಾಲನೆ ತನ್ನ ಮೌಲ್ಯ ಕಳೆದು ಕೊಳ್ಳುತ್ತಿರುವ ಇಂದಿನ ದಿನಗಳಲ್ಲಿ ಎತ್ತಿನ ಗಾಡಿಗಳು, ಈಗಿನ ವೇಗದ ಜೀವನ ಶೈಲಿಗೆ ಹೊಂದದ ಕಾರಣ ಮೂಲೆ ಸೇರಿವೆ. ಅವುಗಳ ಜಾಗದಲ್ಲಿ ಗೂಡ್ಸ್ ಆಟೋಗಳು, ಟ್ರಾಕ್ಟರ್‌ಗಳು ಹಳ್ಳಿಹಳ್ಳಿಗಳಲ್ಲೂ ಕಂಡು ಬರುತ್ತವೆ. ಇವೂ ಸಹ ವಾಯು ಮಾಲಿನ್ಯ ಹಾಗು ಶಬ್ದ ಮಾಲಿನ್ಯಕ್ಕೆ ತಮ್ಮ ಕೊಡುಗೆ ನೀಡುತ್ತಲಿವೆ. ಹಿಂದೆಲ್ಲಾ ಪೈರನ್ನು ಆಳುಗಳ ಸಹಾಯದಿಂದ ಕಟಾವು ಮಾಡಿಸಲಾಗುತ್ತಿತ್ತು. ಆದರೆ ಈಗ ಕಟಾವು ಸಹ ಯಂತ್ರಗಳ ಸಹಾಯದಿಂದಲೇ ಆಗುತ್ತದೆ.

ಯಾಂತ್ರೀಕೃತ ಕೃಷಿಯಿಂದಾಗಿ ಮಾನವ ಸಂಪನ್ಮೂಲದ ಬಳಕೆಯೂ ಮಲೆನಾಡಿನಲ್ಲಿ ಕಡಿಮೆಯಾಗಿದೆ ಎನ್ನಬಹುದು. ಮೊದಲೆಲ್ಲಾ ತಮ್ಮ ಬಿಡುವಿನ ವೇಳೆಯಲ್ಲಿ ಕೋಳಿ ಸಾಕಾಣಿಕೆ, ಮೇಕೆ ಸಾಕಾಣಿಕೆ, ಹಂದಿ ಸಾಕಾಣಿಕೆ ಹೀಗೆ ಪಶು ಸಂಗೋಪನೆಯಲ್ಲಿ ತೊಡಗಿರುತ್ತಿದ್ದ ಅಂದಿನ ಮಲೆನಾಡಿನ ರೈತರು ಇಂದು ತಮ್ಮ ಆ ಉಪಕಸುಬುಗಳನ್ನು ಅಷ್ಟಾಗಿ ಅನುಸರಿಸುತ್ತಿಲ್ಲ . ಕಾರಣ ಮಲೆನಾಡಿನಲ್ಲಿ ಆರಂಭವಾಗಿರುವ ಪೌಲ್ಟ್ರಿಗಳು ಹಾಗು ಡೈರಿಗಳು. ಪೌಲ್ಟ್ರಿ ಫಾರಂಗಳಲ್ಲಿ ಕೋಳಿ ಸಾಕಾಣಿಕೆಯಿಂದ ಕಡಿಮೆ ಅವಧಿಯಲ್ಲಿ
ಕೋಳಿಗಳನ್ನು ಬೆಳೆಸಲು, ಮಾಂಸ ಹಾಗು ಮೊಟ್ಟೆ ಪಡೆಯುವ ಸಲುವಾಗಿ ಹಾರ್ಮೊನ್‌ಗಳ ಬಳಕೆ ಸಾಮಾನ್ಯವಾಗಿದೆ.

ಅಂತಹಾ ಪಕ್ಷಿಗಳ ಮಾಂಸ ಸೇವಿಸಿದ ವ್ಯಕ್ತಿಗಳ ದೇಹದೊಳಗೆ ಆತನ ಅರಿವಿಗೆ ಬಾರದಂತೆ ಈ ರಾಸಾಯನಿಕ ಅಂಶಗಳು ಶೇಖರಣೆಗೊಳ್ಳುತ್ತವೆ. ಇದು ವ್ಯಕ್ತಿಯ ಆರೋಗ್ಯದ ಮೇಲೆ ಎಡ ಪರಿಣಾಮ ಬೀರುತ್ತದೆ. ಡೈರಿ ಉದ್ಯಮ ತಲೆಎತ್ತಿದ ಪ್ರಯುಕ್ತ ಹೈನುಗಾರಿಕೆ ಇಲ್ಲಿ ಗಣನೀಯವಾಗಿ ಕುಸಿದಿದೆ.

ಮಲೆನಾಡಿನಲ್ಲಿ ಮೊದಲು ನಾಗರೀಕ ಪ್ರಪಂಚದ ಸಂಪರ್ಕ ಇರದಿದ್ದ ದಿನಗಳಲ್ಲಿ ತಮ್ಮ ಮನೆಗಳಲ್ಲೇ ಕೃಷಿ ಚಟುವಟಿಕೆಗೆ, ಮನೆಯ ಬಳಕೆಗೆ ಅಗತ್ಯವಾಗಿರುತ್ತಿದ್ದ ಬುಟ್ಟಿಗಳು, ಮೊರ, ಚಾಪೆಗಳನ್ನು ಬಿದಿರನ್ನು ಕಾಡಿನಿಂದ ತಂದು ಸಣ್ಣಗೆ ಸೀಳಿ, ತಮ್ಮ ಮನೆಗಳಲ್ಲೇ ಹೆಣೆಯುತ್ತಿದ್ದರು. ಬಿಡುವಿನ ವೇಳೆಯನ್ನು ಹೀಗೆ ಸದುಪಯೋಗ ಪಡಿಸಿಕೊಳ್ಳುತ್ತಿದ್ದರು. ಈಗ ಐಷಾರಾಮಿ ಜೀವನಕ್ಕೆ ಮಾರುಹೋದ ರೈತ ಸಮುದಾಯ ಇಂದು ತಮ್ಮ ಬಿಡುವಿನ ಸಮಯದಲ್ಲಿ ರಾಜಕೀಯದ ಬಗ್ಗೆ ಹರಟೆ ಹೊಡೆಯುತ್ತಲೋ, ಇತರ ದುಶ್ಚಟಗಳೆಡೆಗೆ ವಾಲುತ್ತಲಿರುವುದು ನಿಜಕ್ಕೂ ವಿಷಾದನೀಯ. ಮನೆಗೆ ಅಗತ್ಯವಿದ್ದ ಹಗ್ಗವನ್ನು ಸಹ ರೈತರೇ ಹೊಸೆದು ಕೊಳ್ಳುತ್ತಿದ್ದುದ್ದು ವಾಡಿಕೆ. ಆದರೆ ಇಂದು ಪ್ಲಾಸ್ಟಿಕ್ ಹಗ್ಗಗಳು, ಪ್ಲಾಸ್ಟಿಕ್ ಹಾಗು ರಬ್ಬರ್ ಬುಟ್ಟಿಗಳು, ಮೊರಗಳು ಅವುಗಳ ಸ್ಥಾನ ಪಡೆದುಕೊಂಡಿವೆ.

ಹಿಂದೆಲ್ಲಾ ಜೈವಿಕ ಪದಾರ್ಥಗಳಿಂದಲೇ ತಯಾರಿಸಲಾಗುತ್ತಿದ್ದ ಇವುಗಳು ಮುರಿದು ಹೋದರು ಸುಲಭವಾಗಿ ಮಣ್ಣಿನಲ್ಲಿ ಕೊಳೆಯುತ್ತಿದ್ದವು. ಅವುಗಳ ಬಳಕೆಯಲ್ಲಿ ಯಾವುದೇ ತೊಂದರೆ ಇರಲಿಲ್ಲ. ಆದರೆ ಇಂದು ಪ್ಲಾಸ್ಟಿಕ್ ಸಲಕರಣೆಗಳ ಬಳಕೆಯಿಂದಾಗಿ ಪರಿಸರಕ್ಕೆ ಹಾನಿ ತಪ್ಪಿದ್ದಲ್ಲ.

ವಾಣಿಜ್ಯ ಲಾಭಕಾರಿ ಬೆಳೆಯಾಗಿ ಕಂಡು ಬಂದ ವೆನಿಲ್ಲಾ ಮಲೆನಾಡನ್ನು ತೀರಾ ಇತ್ತೀಚೆಗಷ್ಟೇ ಪ್ರವೇಶಿಸಿತು. ಸ್ಥಳೀಯ ರೈತರಿಗೂ ಸುಲಭವಾಗಿ ಅಧಿಕ ಹಣಗಳಿಸುವ ಮಾರ್ಗವಾಗಿ ಇದು ಕಂಡು ಬಂತು. ಎಲ್ಲೆಡೆ ನೋಡಿದರೂ ವೆನಿಲ್ಲಾದ್ದೇ ಮಾತು ಕೇಳಿಬರುತ್ತಿತ್ತು. ಕೆ.ಜಿ.ಯೊಂದಕ್ಕೆ ವೆನಿಲ್ಲಾದ ಬೆಲೆ ಹಸಿ ಬೀನ್ಸ್‌ಗೆ ಮೂರು ಸಾವಿರ ರೂಪಾಯಿಯಾದರೆ, ಒಣಗಿದ ಬೀನ್ಸ್

ಬೆಲೆಕೆ.ಜಿ.ಯೊಂದಕ್ಕೆ ಇಪ್ಪತ್ತೈದು ಸಾವಿರವಿತ್ತು. ಹಣದ ಆಮಿಷ ಅಧಿಕಲಂಭದಾಸೆ ಗೊಳಗಾಗಿ ಮಲೆನಾಡಿನಲ್ಲಿ ಹೇರಳವಾಗಿ ವೆನಿಲ್ಲಾ ಕೃಷಿ ಪ್ರಾರಂಭವಾಯಿತು.

ಈಗಾಗಲೇ ಸಂಪ್ರಾದಾಯಿಕ ಬೆಳೆಗಳನ್ನು ಬೆಳೆಯುತ್ತಿದ್ದ ಜಾಗವನ್ನು ತೆರವುಗೊಳಿಸಿ, ವೆನಿಲ್ಲಾವನ್ನು ಬೆಳೆಸಲಾರಂಭಿಸಿದರು. ವೆನಿಲ್ಲಾ ನರ್ಸರಿಗಳು ಮಲೆನಾಡಿನಾದ್ಯಂತ ಕಂಡುಬಂದವು. ಅಡಿಕೆ ಮರಗಳಿಗೆ ಹಬ್ಬಿಸಿದ್ದ ಎಲೆಬಳ್ಳಿ ,ಮೆಣಸಿನ ಬಳ್ಳಿಗಳನ್ನು ತೆಗೆದು ಆ ಸ್ಥಳದಲ್ಲಿ ವೆನಿಲ್ಲಾ ನೆಡಲಾಯಿತು. ಇನ್ನೂ ಕೆಲವರಂತೂ ತಮ್ಮ ತೋಟಗಳಲ್ಲೆಲ್ಲಾ ವೆನಿಲ್ಲಾ ಕೃಷಿ ಆರಂಭಿಸಿದರೆ ಇನ್ನೂ ಕೆಲವರು ಕಲ್ಲುಕಂಬ ನೆಡಿಸಿ ಹೊಲಗದ್ದೆಗಳಲ್ಲಿ ವೆನಿಲ್ಲಾ ಬೆಳೆಸಿದರು. ಬೇಡಿಕೆ ಹೆಚ್ಚಾಗಿದ್ದರಿಂದ ಮಾರುಕಟ್ಟೆಯಲ್ಲಿ ಉತ್ತಮ ಬೆಲೆಯು ರೈತರಿಗೆ ದೊರೆಯಿತು.

ತಾವು ಇತರ ಬೆಳೆಗಳಿಂದ ಎಂದೂ ಕಂಡರಿಯದ ಲಾಭದಿಂದ ಪ್ರೇರಣೆ ಹೊಂದಿದ ಕೃಷಿಕರು ಹೆಚ್ಚು ವೆನಿಲ್ಲಾ ಬೆಳಿಯ ತೊಡಗಿದರು. ಆಗಂತೂ ವೆನಿಲ್ಲಾ ಬೆಳೆಗೆ ಕಳ್ಳಕಾಕರರ ಕಾಟ ಮಲೆನಾಡಿನಾದ್ಯಾಂತ ಹೆಚ್ಚಾಗಿ ರಾತ್ರಿ ಹಗಲೆನ್ನದೆ ಕೋವಿ ಹಿಡಿದು ತಮ್ಮ ಹೊಲಗದ್ದೆಗಳನ್ನು ರೈತರು ಕಾವಲು ಕಾಯ್ದರು. ಬೆಳೆಯೊಂದರ ಸಲುವಾಗಿ ಮೂರು ನಾಲ್ಕು ವರ್ಷಗಳ ಹಿಂದೆ ಕೊಲೆ ಸುಲಿಗೆ ದರೋಡೆಗಳು ನೆಡೆದವೆಂದರೆ ನಂಬುವುದು ಕಷ್ಟವೇ.

ಇದರ ಸಲುವಾಗಿ ಮಲೆನಾಡಿನ ಹಲವೆಡೆ ಕೊಲೆ, ಹೊಡೆದಾಟ ಬಡಿದಾಟಗಳೂ ವರದಿಯಾದವು. ಅಲ್ಪಾವಧಿಯಲ್ಲಿ ವೆನಿಲ್ಲಾದ ಬೆಲೆ ಇಳಿಯ ತೊಡಗಿ ಸಂಪೂರ್ಣವಾಗಿ ನೆಲ ಕಚ್ಚಿತು. ಇತರೆ ಬೆಳೆಗಳನ್ನು ಕಡೆಗಾಣಿಸಿ ವೆನಿಲ್ಲಾ ಬೆಳೆಯುತ್ತಿದ್ದ ರೈತರು ಆರ್ಥಿಕವಾಗಿ ಸಾಮಾಜಿಕವಾಗಿ ಅತೀವ ಸಂಕಷ್ಟಕ್ಕೀಡಾದರು. ಬೆಲೆ ಕುಸಿತದಿಂದ ಕಂಗಾಲಾದರು. ಇದರಿಂದಾಗಿ ಅನೇಕ ರೈತರು ಪುನ: ಬೇರೆ ಕೃಷಿ ಆರಂಭಿಸಲು ತತ್ತರಿಸಿದರು.

ವೆನಿಲ್ಲಾ ದಾಳಿಯಿಂದಾಗಿ ಸಂಪ್ರಾದಾಯಿಕ ಬೆಳೆಗಳಾದ ಎಲೆಬಳ್ಳಿ, ಮೆಣಸು, ಬಾಳೆ, ಭತ್ತಗಳು ತಾತ್ಕಲಿಕವಾಗಿ ಮೂಲೆ ಹಿಡಿದವು.ರೈತರಿಗೆ ವೆನಿಲ್ಲಾ ಬೆಳೆಯುವಂತೆ ಪ್ರೇರೆಪಿಸಿದ ಬಂಡವಾಳ ಶಾಹಿಗಳು ಬೆಲೆ ಕುಸಿತದ ನಂತರ ಅವರೆಡೆಗೆ ತಿರುಗಿಯೂ ನೋಡಲಿಲ್ಲ. ಎಲ್ಲರೂ ವೆನಿಲ್ಲಾ ಬೆಳೆದ ಪರಿಣಾಮ ಕೃಷಿ ಏಕರೂಪಿಯಾಗಿ ಹಲವಾರು ಸಂಕಷ್ಟಗಳಿಗೆ ಎಡೆಮಾಡಿಕೊಟ್ಟಿತು. ಕೇವಲ ಮಳೆ ಅವಲಂಬಿತವಾಗಿದ್ದ ಕೃಷಿ ವೆನಿಲ್ಲಾ ಬೆಳೆ ಬಂದನಂತರ ಕೊಳುವೆ ಬಾವಿಗಳು ಮತ್ತು ಹನಿ ನೀರಾವರಿ ಪದ್ಧತಿ ಇತ್ಯಾದಿಗಳು ಮಲೆನಾಡನ್ನು ಪ್ರವೇಶಿಸಿದವು.

ಉತ್ಪಾದನೆ ಹೆಚ್ಚಾದಂತೆಲ್ಲಾ ವೆನಿಲ್ಲಾದ ಬೆಲೆ ಕುಸಿಯಿತು. ನಿಜವಾಗಿ ಮಾರುಕಟ್ಟೆಯಲ್ಲಿದ್ದ ಬೆಲೆಗಿಂತ ಅಧಿಕ ಬೆಲೆ ದೊರಕುತ್ತದೆ ಎಂದು ರೈತರಿಗೆ ತಪ್ಪು ಮಾಹಿತಿ ನೀಡಿ

ಪೈಪೋಟಿಯಿಂದ ಹೆಚ್ಚು ವೆನಿಲ್ಲಾ ಬೆಳೆಯಲು ಕಾರಣರಾದ ಬಂಡವಾಳಶಾಹಿಗಳು ಕಡಿಮೆ ಬೆಲೆಗೆ ದೊರೆತ ಕೃತಕ ವೆನಿಲ್ಲಾ ಸ್ವಾದದೆಡೆ (Artificial Venialla assence) ಸರಿದರು.

ಮಡಗಾಸ್ಕರ್‌ನಿಂದ ರಫ್ತಾಗುವ ವೆನಿಲ್ಲಾ ಸಹ ಮಲೆನಾಡಿನಲ್ಲಿ ವೆನಿಲ್ಲಾ ಬೆಲೆ ಕುಸಿತಕ್ಕೆ ಕಾರಣವಾಯಿತು. ವೆನಿಲ್ಲಾ ಬೆಳೆಗೆ ವಕ್ಕರಿಸಿದ ಅನೇಕ ವೈರಾಣು ರೋಗಗಳು ವೆನಿಲ್ಲಾ ತೋಟಗಳನ್ನು ಹಾಳು ಗೆಡವಿದರೆ, ಅದಕ್ಕೆ ತಗಲುತ್ತಿದ್ದ ಶಿಲೀಂದ್ರಗಳು ಇಳುವರಿಯನ್ನು ಕಡಿಮೆಗ ೊಳಿಸಿದವು. ಜೊತೆಯಲ್ಲಿ ಬಸವನ ಹುಳು (Snail) ಗಳ ಕಾಟದಿಂದಾಗಿ ಇಳುವರಿ ಕ್ಷೀಣಿಸಿ ರೈತರು ಈ ಇಲ್ಲಾ ತೊಂದರೆಗಳಿಂದ ಮುಕ್ತಿ ಪಡೆಯಲು ಮೊರೆ ಹೋದದ್ದು ಶಿಲೀಂದ್ರ ನಾಶಕ, ಹಾಗು ಕೀಟ ನಾಶಕಗಳಿಗೆ. ವೆನಿಲ್ಲಾ ಬೆಳೆಯ ಸಂರಕ್ಷಣೆಗಾಗಿ ಕಾಪರ್ ಸಲ್ಫೇಟ್ (Copper Sulphate) ದ್ರಾವಣವನ್ನು ಸಾಮಾನ್ಯವಾಗಿ ಸಿಂಪಡಿಸಲಾಗುತ್ತಿದೆ. ಇದರಿಂದ ಪರಿಸರಕ್ಕೆ ಹಾನಿ ತಪ್ಪಿದ್ದಲ್ಲ.

ವೆನಿಲ್ಲಾ ತೋಟದಲ್ಲಿನ ಇತರ ಚಿಕ್ಕಪುಟ್ಟ ಜೀವಿ ಸಮೂಹ, ಉಪಕಾರಿ ಕೀಟಗಳು, ಮಣ್ಣಿನಲ್ಲಿರುವ ಉಪಕಾರಿ ಸೂಕ್ಷ್ಮಾಣು ಜೀವಿಗಳು ಇದರಿಂದ ತೊಂದರೆಗೆ ಒಳಗಾಗಿವೆ. ಮತ್ತೊಂದು ಮುಖ್ಯವಾದ ಅಂಶವೆಂದರೆ, ವೆನಿಲ್ಲಾ ಬಳ್ಳಿಯಲ್ಲಿ ಅರಳಿದ ಹೂವುಗಳಿಗೆ ಅವುಗಳು ಅರಳಿದ ದಿನದಂದೇ ಪರಾಗ ಸ್ಪರ್ಷವಾಗಬೇಕು. ನೈಸರ್ಗಿಕವಾದ ಪರಾಗ ಪ್ರಸರಣ ಕ್ರಿಯೆ ಇಲ್ಲಿ ಕಂಡು ಬರುವುದಿಲ್ಲ. ಅದಕ್ಕಾಗಿ ಚಿಕ್ಕ ಮಕ್ಕಳು ಮತ್ತು ಹೆಂಗಸರು ಬೆಳಿಗ್ಗೆಯೇ ಪರಾಗಸ್ಪರ್ಷ ಕ್ರಿಯೆಯನ್ನು ತಮ್ಮ ಬೆರಳುಗಳಿಂದ ಮಾಡುತ್ತಾರೆ ಎನ್ನುತ್ತಾರೆ. ಸ್ಥಳೀಯರೇ ಆದ ವೈದ್ಯ ಡಾ. ಚಂದ್ರಪ್ಪ ಗೌಡರವರು.

ಮಲೆನಾಡಿನಲ್ಲಿ ವೆನಿಲ್ಲಾ ಸ್ವಾದವನ್ನು ಅಧಿಕ ಪ್ರಮಾಣದಲ್ಲಿ ಉತ್ಪಾದಿಸಲು ಸರಿಯಾದ ಅನುಕೂಲ ದೊರಕದೆ ಮಧ್ಯವರ್ತಿಗಳಿಗೋ ಕಂಪನಿವರಿಗೋ ಕಡಿಮೆ ಬೆಲೆಗೆ ವೆನಿಲ್ಲಾ ಮಾರಾಟ ಮಾಡಬೇಕಾಗಿದೆ ಎಂಬ ಅಳಲು ಅವರದು.

# 8 .ಸಮಾರೋಪ

ಪಶ್ಚಿಮ ಕರಾವಳಿ ತೀರದಲ್ಲಿ ತಲೆಎತ್ತಿರುವ ವಿದ್ಯುತ್ ಸ್ಥಾವರಗಳು, ಕೈಗಾರಿಕೆಗಳು ಮಲೆನಾಡಿನ ಸುಂದರ ಪರಿಸರ ಮಾಲಿನ್ಯಕ್ಕೆ ಕೈಜೋಡಿಸಿವೆ. ನದಿ ನೀರು ಕಲುಷಿತಗೊಂಡಿದ್ದು, ಅಣೆಕಟ್ಟುಗಳಿಲ್ಲಿನ ನದಿನೀರು ಸಹ ಕಲುಷಿತ ಹೊಂದಿರುವುದಷ್ಟೇ ಅಲ್ಲದೇ ಅಂತರ್ಜಲವೂ ಕಲುಷಿತ ಗೊಂಡಿದೆ. ಪರಿಸ್ಥಿತಿ ಹೀಗೆ ಮುಂದುವರಿದರೆ, ಕುಡಿಯಲು ಯೋಗ್ಯವಾದ ನೀರು ದೊರೆಯುವುದು ಮಲೆನಾಡಿನಲ್ಲಿ ದುಸ್ತರವಾಗಬಹುದು.

ಕೈಗಾರಿಕೆಗಳಿಂದ ಹರಿದು ಬರುವ ತ್ಯಾಜ್ಯ ತುಂಗಾನದಿಯನ್ನು ಸೇರಿ ನದಿ ನೀರಿಗೆ ವಿಷಪ್ರಾಶನ ಮಾಡಿವೆ. ಆ ನೀರನ್ನು ಕುಡಿವ ಅನೇಕ ವನ್ಯ ಜೀವಿಗಳು ರೋಗಗಳಿಗೀಡಾಗಿ ಸಾವನ್ನಪ್ಪಿವೆ. ವನ್ಯ ಜೀವಿ ಸಂಕುಲ ಇಂದು ಗಣನೀಯವಾಗಿ ಕಡಿಮೆಯಾಗ ತೊಡಗಿವೆ. ನಾವು ಈ ಕೂಡಲೇ ಈ ವಿಚಾರದಲ್ಲಿ ಎಚ್ಚೆತ್ತು ಕೊಳ್ಳದಿದ್ದರೆ ಆಗುವ ಅನಾಹುತವನ್ನು ಊಹಿಸಲೂ ಅಸಾಧ್ಯ.

ಜಾನುವಾರುಗಳು ಈ ನೀರನ್ನು ಕುಡಿದರೆ ಅವುಗಳ ದೇಹದಲ್ಲಿ ಸೇರಿಕೊಳ್ಳುವ ಈ ರಾಸಾಯನಿಕಗಳು ಅವು ಕೊಡುವ ಹಾಲಿನ ಮುಖಾಂತರ ನಮ್ಮ ದೇಹದಲ್ಲಿ ಪುನ: ಸೇರಿ ರೋಗಗಳಿಗೆಡೆ ಮಾಡಿ ಕೊಡುತ್ತ, ನಾಸ್ರೋಡಾಮಾಸ್ ಅಂದೆ ಹೇಳಿದ್ದಂತೆ, ಇನ್ನು ಮಹಾಯುದ್ದ ನೆಡೆಯುವುದು ನೀರಿಗೊಸ್ಕರವೇ ಎಂಬ ಮಾತು ನಿಜವಾಗುವುದರಲ್ಲಿ ಎರಡು ಮಾತಿಲ್ಲ.

ಮಾನವ ಮತ್ತು ಪರಿಸರದ ಸಂಬಂಧ ಅನಾದಿ ಕಾಲದಿಂದಲೂ ಬಂದಿದೆ. ಪರಿಸರವಿಲ್ಲದೆ ಮಾನವನಿಲ್ಲ, ಮಾನವನಿಲ್ಲದೆ ಪರಿಸರವಿಲ್ಲ. ಭೂಮಿ ಮಾನವನ ವಾಸಸ್ಥಾನ. ಭೂಮಿಯ ಮೇಲೆ ಅನೇಕ ಗೋಚರ ಮತ್ತು ಅಗೋಚರ ವಸ್ತುಗಳಿವೆ. ಅವು ಮಾನವನ ಸುತ್ತಲೂ ಆವರಿಸಿವೆ. ಉದಾ: ನೆಲ, ಜಲ, ವಾಯು, ಮಣ್ಣು, ಸಸ್ಯ, ಪ್ರಾಣಿ ಇತ್ಯಾದಿ. ಹೀಗೆ ಮಾನವನ ಸುತ್ತ ಮುತ್ತ ಆವರಿಸುವ ಬಾಹ್ಯ ಸ್ಥಿತಿಗಳನ್ನು `ಪರಿಸರ` ಎನ್ನುತ್ತೇವೆ. ಜೀವಿ, ನೆಲ, ಗಾಳಿ, ಬೆಳಕು, ಉಷ್ಣತೆ, ನೀರು ಮೊದಲಾದವೆಲ್ಲವೂ ಪರಿಸರದ ವ್ಯಾಪ್ತಿಗೆ ಬರುತ್ತವೆ. ಪರಿಸರಕ್ಕೆ ಅನುಗುಣವಾಗಿ ಜೀವಿಗಳು ಸ್ವರೂಪ, ವರ್ತನೆ, ಆತ್ಮರಕ್ಷಣೆ ಮತ್ತು ಬೆಳವಣಿಗೆಗಳನ್ನು ಹೊಂದಾಣಿಕೆ ಮಾಡಿಕೊಳ್ಳುತ್ತವೆ.

ಪರಿಸರವನ್ನು ಸ್ಥೂಲವಾಗಿ ಎರಡು ವಿಧಗಳಾಗಿ ವಿಂಗಡಿಸಬಹುದು.

1) ಪ್ರಾಕೃತಿಕ ಪರಿಸರ (Natural Environment) ಅಥವಾ ಭೌತಿಕ ಪರಿಸರ
2) ಸಾಂಸ್ಕೃತಿಕ (cultural) ಪರಿಸರ ಅಥವಾ ಅಭೌತಿಕ ಪರಿಸರ.

ಪರಿಸರ ವ್ಯವಸ್ಥೆಯು ಜೀವಮಂಡಲದ ಒಂದು ಕಾರ್ಯ ಘಟಕವಾಗಿದೆ. ಅದು ಜೀವಿಗಳ ಸಮುದಾಯ ಮತ್ತು ಅವುಗಳ ಅಜೈವಿಕ ಅಂದರೆ ಭೌತಿಕ ಅಂಶಗಳ ನಡುವೆ ಇರುವ ಸಂಬಂಧಗಳನ್ನು ಸೂಚಿಸುತ್ತದೆ. ಅಂದರೆ ಅದು ಸಸ್ಯಗಳು, ಪ್ರಾಣಿಗಳು ಮತ್ತು ಸೂಕ್ಷ್ಮ ಜೀವಿಗಳು ಮೊದಲಾದ

ಜೀವರಾಶಿಗಳು ಮತ್ತು ನೀರು, ಬೆಳಕು, ಭೂಮಿ, ಉಷ್ಣಾಂಶ, ಮಳೆ, ವಾಯು ಮೊದಲಾದ ಅಜೈವಿಕ ಅಥವಾ ಭೌತಿಕ ಅಂಶಗಳ ನಡುವೆ ಇರುವ ಸಂಬಂಧಗಳನ್ನು ಒಳಗೊಂಡಿರುತ್ತವೆ. ಒಂದು ನಿರ್ದಿಷ್ಟ ಸ್ಥಳದಲ್ಲಿ ವಾಸಿಸುವ ಜೀವಿಗಳು ತಮ್ಮದೇ ಆದ ಪರಿಸರದ ವ್ಯವಸ್ಥೆಯನ್ನು ರೂಪಿಸಿಕೊಳ್ಳಬಹುದಾಗಿದೆ. ಪರಿಸರ ವ್ಯವಸ್ಥೆಗಳು ಕೆರೆ, ಮೈದಾನ,ಬೆಟ್ಟಗುಡ್ಡ, ಅರಣ್ಯ ಅಥವಾ ಸಾಗರದಂತೆ ವಾಸ್ತವಿಕ ಅಂಶಗಳಾಗಿರಬಹುದು. ಪರಿಸರ ವ್ಯವಸ್ಥೆಯು ಜೈವಿಕ ಅಥವಾ ಅಜೈವಿಕ ಘಟಕಗಳಿಂದ ರೂಪಿತವಾಗಿರುತ್ತದೆ.

ಉದಾ: ಒಂದು ಕೆರೆಯ ಪರಿಸರ ವ್ಯವಸ್ಥೆಯಲ್ಲೂ ಜಲತೀರ ಮೀನು, ಕಪ್ಪೆ, ಸಸ್ಯ ಪ್ಲವಕ (Plankton) ಪ್ರಾಣಿ ಪ್ಲವಕ ಮೊದಲಾದ ಜೀವಿಗಳಿರುತ್ತವೆ. ಆದರೆ ನೀರು ಕರಗಿಸುವ ಖನಿಜಗಳು ಮತ್ತು ಅನಿಗಳು ಅಜೈವಿಕ ಅಂಶಗಳಾಗಿವೆ.

ಪರಿಸರದ ಅಜೈವಿಕ ಅಂಶಗಳೆಂದರೆ ಘನ ಪದಾರ್ಥಗಳು (ಉದಾ: ಖನಿಜಗಳು) ದ್ರವ ಪದಾರ್ಥಗಳು (ಉದಾ: ನೀರು) ಮತ್ತು ಅನಿಲಗಳು (ಉದಾ:ಆಮ್ಲಜನಕ, ಇಂಗಾಲದ ಡೈ ಆಕ್ಸೈಡ್ ಇತ್ಯಾದಿ) ಜೈವಿಕ ಮತ್ತು ಅಜೈವಿಕ ಅಂಶಗಳು ಒಂದು ವ್ಯೂಹದಂತೆ ಸುವ್ಯವಸ್ಥಿತವಾಗಿ ಪ್ರಕ್ರಿಯೆ ನಡೆಸುತ್ತವೆ. ಆದ್ದರಿಂದ ಪರಿಸರ ವ್ಯವಸ್ಥೆಗಳು ಹೆಚ್ಚಾಗಿ ಸ್ವನಿಯಂತ್ರಿತವಾಗಿರುತ್ತವೆ. ಅವುಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಸ್ಥಿರತೆ ಮತ್ತು ಸಮ ಸ್ಥಿತಿಗಳಿರುತ್ತವೆ.

ಎಲ್ಲಾ ಪರಿಸರ ವ್ಯವಸ್ಥೆಯಲ್ಲಿ ಹೆಚ್ಚು ಪ್ರಭಾವ ಬೀರುತ್ತಿರುವ ಒಂದು ಜೈವಿಕ ಅಂಶವೆಂದರೆ, ಮಾನವ. ಅವನು ತನ್ನ ಚಟುವಟಿಕೆಗಳಿಂದ ಪರಿಸರ ವ್ಯವಸ್ಥೆಗಳಲ್ಲಿನ ಪ್ರಾಕೃತಿಕ ಸಾಮರಸ್ಯಕ್ಕೆ ಭಂಗವನ್ನುಂಟು ಮಾಡಿದ್ದಾನೆ. ನೈಸರ್ಗಿಕ ಅರಣ್ಯಗಳನ್ನು ಮತ್ತು ಹುಲ್ಲು ಗಾವಲುಗಳನ್ನು, ಪ್ರಾಣಿ ಸಂಕುಲವನ್ನು ನಾಶ ಮಾಡಿದ್ದಾನೆ. ಕೈಗಾರಿಕೆಗಳನ್ನು ಸ್ಥಾಪಿಸಿ ಭೂ, ಜಲ ಮತ್ತು ವಾಯು ಮಾಲಿನ್ಯಕ್ಕೆ ಕಾರಣವಾಗಿದ್ದಾನೆ. ನೈಸರ್ಗಿಕ ಸಂಪನ್ಮೂಲದ ನಾಶದಿಂದಾಗಿ ಇಂದು ಪ್ರಾಕೃತಿಕ ಅಸಮತೋಲನದಿಂದಾಗಿ,

<u>ಅರಣ್ಯನಾಶ:-</u> ಅರಣ್ಯ ರಕ್ಷಣೆಯ ಕೂಗು ಗಗನ ಮುಟ್ಟಿದೆ. ಆದರೆ ನಾವು ಅದಕ್ಕೆ ಕಿವಿಗೊಡುತ್ತಿಲ್ಲ. ಏಕೆಂದರೆ ನಮಗೆ ನಮ್ಮ ಮುಗಿಲೆತ್ತರದ ಆಸೆ, ಆಕಾಂಕ್ಷೆಗಳು ನೀಗಿದರೆ ಸಾಕಲ್ಲವೇ? ದಟ್ಟ ಅರಣ್ಯಗಳ ಬೀಡಾಗಿದ್ದ ಲ್ಯಾಟಿನ್ ಅಮೇರಿಕಾದ ಮೂರರ ಎರಡುಭಾಗ ಕಾಡು ಈಗ ಬೋಳಾಗಿ ನಿಂತಿದೆ. ನಮ್ಮ ದೇಶದ ಹಿಮಾಲಯದ ತಪ್ಪಲಿನ ಸೊಬಗಿನ ದಟ್ಟ ಅರಣ್ಯಗಳು ಅಲ್ಲಲ್ಲಿ ಬರಡಾಗುತ್ತ ಬಂದಿವೆ. ಅನೇಕ ಔಷಧಿಯ ಗಿಡಮೂಲಕೆಗಳು ಕಣ್ಮರೆಯಾಗುತ್ತಿವೆ. ಅರಣ್ಯಗಳು ನಾಶವಾದರೆ ಭೂಮಿ ಬಂಜರಾಗುತ್ತದೆ. ಕೃಷಿ ಭೂಮಿಗಾಗಿ ಕಡಿದ ವನಪ್ರದೇಶ ಮರುಭೂಮಿ ಆಗುತ್ತಿದೆ. ಸೌದೆಗಾಗಿ ಕಡಿದುರುಳಿಸಿದ ವೃಕ್ಷ ಪ್ರದೇಶಗಳು ಬಂಡೆಗಳ ಮರಡಿಗಳಾಗಿ ಹೋಗುತ್ತಿವೆ. ನಗರಗಳನ್ನು ನಿರ್ಮಿಸಲು ಅರಣ್ಯಗಳನ್ನು ನೆಲಸಮ ಮಾಡಲಾಗಿದೆ. ಅರಣ್ಯವಿಲ್ಲದ ಭೂಮಿ ಬಿರಿದು ಬೆಂಗಾಡಾ

ಗುತ್ತಿದೆ. ಅರಣ್ಯವಿಲ್ಲದೇ ಹೋದರೆ ಹವಮಾನ ಏರುಪೇರಾಗುತ್ತದೆ. ಅರಣ್ಯಗಳು ಕಡಿಮೆಯಾದಂತೆಲ್ಲಾ ಮಳೆ ಮಾರುತಗಳೆಲ್ಲ ಏರುಪೇರಾಗುತ್ತವೆ.

ಅಷ್ಟೇ ಅಲ್ಲದೆ ಪ್ರಕೃತಿ ಕ್ಷೀಣಿಸಿದಂತೆಲ್ಲಾ ವಾತಾವರಣದಲ್ಲಿನ ಇಂಗಾಲದ ಡೈ ಆಕ್ಸೈಡ್ ಹೆಚ್ಚುತ್ತಾ ಹೋಗುತ್ತದೆ. ಇದರಿಂದ ಉತ್ತರ, ದಕ್ಷಿಣ ಧ್ರುವಗಳಲ್ಲಿ ಶೇಖರವಾಗಿರುವ ಹಿಮರಾಶಿಗಳು ಕರಗುತ್ತಿವೆ. ಇದರಿಂದ ಸಾಗರದಲ್ಲಿನ ನೀರಿನ ಮಟ್ಟ ಏರುತ್ತಾ ಆರು ಮೀಟರಿನಷ್ಟು ಹೆಚ್ಚಬಹುದು. ಕಡಲ ತೀರದಲ್ಲಿರುವ ಸಾವಿರಾರು ಚದುರ.ಕಿ.ಮೀ. ವರೆಗಿನ ಭೂ ಪ್ರದೇಶಗಳು, ಮಹಾನಗರಗಳು, ಸಮುದ್ರದಲ್ಲಿ ಸಮಾಧಿಗೊಳ್ಳುತ್ತವೆ.

ಅಪಾರ ಜೈವಿಕ ರಾಶಿಯನ್ನು ತನ್ನೊಳಗೆ ಹೊಂದಿರುವ ಸಹ್ಯಾದ್ರಿಯ ತಪ್ಪಲಿನ ಅರಣ್ಯ ಇಂದು ಅನೇಕಾನೇಕ ಕಾರಣಗಳಿಂದ ಕ್ಷೀಣಿಸತೊಡಗಿದ್ದು, ಈ ಮೇಲೆ ಕೊಟ್ಟಿರುವ ಉದಾಹರಣೆಗಳಿಂದ ದೃಢಪಟ್ಟಿದೆ.

ವ್ಯವಸಾಯದ ತೀವ್ರ ನವೀಕರಣ:- ಜನಸಂಖ್ಯೆ ಏರಿದಂತೆ ವ್ಯವಸಾಯೋತ್ಪನ್ನಗಳ ಉತ್ಪಾದನೆಯೂ ಹೆಚ್ಚಿಸ ಬೇಕಾಗಿರುತ್ತದೆ. ಇದಕ್ಕಾಗಿ ವ್ಯವಸಾಯದ ಪದ್ಧತಿಯನ್ನು ಬದಲಾಯಿಸಿ ಕೀಟನಾಶಕ, ರಾಸಾಯನಿಕ ಗೊಬ್ಬರ, ಮುಂತಾದವುಗಳನ್ನು ಬಳಸಬೇಕಾಗುತ್ತದೆ. ಈ ರಾಸಾಯನಿಕ ಗೊಬ್ಬರ ಮತ್ತು ಕೀಟನಾಶಕಗಳನ್ನು ಬಳಸಿ ಬೆಳೆಸಿದ ಹುಲ್ಲನ್ನು ದನಕರುಗಳು ಮೇಯ್ದು ಅವು ಕಾಯಿಲೆಗೀಡಾಗುತ್ತವೆ. ಅವುಗಳ ಹಾಲು ಮುಂತಾದವುಗಳನ್ನು ಬಳಸಿದಾಗ ಮಾನವನು ಕಾಯಿಲೆ ಗೀಡಾಗುತ್ತಾನೆ.

ಅಂತರ್ಜಲದ ವ್ಯರ್ಥ ಬಳಕೆ:- ಕೃಷಿಗೆ ಸದಾಕಾಲ ನೀರು ಒದಗಿಸುವ ಉದ್ದೇಶದಿಂದ ಮಾನವನು ಭೂಮಿ ಮೇಲ್ಮೈಯ ( ನದಿ, ಕೆರೆ, ಸರೋವರ ಇತ್ಯಾದಿ) ನೀರನ್ನಲ್ಲದೆ ಒಳಪದರದಲ್ಲಿನ ನೀರಿಗೂ ಕೊಳವೆ ಬಾವಿಗಳ ಮೂಲಕ ಲಗ್ಗೆ ಹಾಕಿದ್ದಾನೆ. ಇದರಿಂದ ಭೂಮಿಯಲ್ಲಿ ರಂಧ್ರಗಳು ಉಂಟಾದಹಾಗೆ ಭೂಸವೆತ ಹಾಗೂ ಭೂಕಂಪಗಳುಂಟಾಗುತ್ತವೆ. ಅಷ್ಟೇಅಲ್ಲದೇ ಅತೀ ಆಳದ ಅಂತರ್ಜಲದ (underground water) ಬಳಕೆಯಿಂದಾಗಿ ಭೂಮಿಯಲ್ಲಿ ಲವಣಗಳ ಅಂಶ ಹೆಚ್ಚುತ್ತಿದೆ. ನದಿ ದಂಡೆಯ ಭೂಮಿ ಕ್ರಮೇಣ ಸಾರಹೀನವಾಗುತ್ತಿದೆ.

ವಾಯು ಮಾಲಿನ್ಯ:- ಪಶ್ಚಿಮ ಘಟ್ಟಗಳಲ್ಲಿ ದೊರಕುವ ಅಪಾರ ಮೂಲ ವಸ್ತುಗಳಿಂದಾಗಿ ಮತ್ತು ನೀರಿನ ಸಂಪನ್ಮೂಲದಿಂದಾಗಿ ಕಾರ್ಖಾನೆಗಳು ಅಧಿಕ ಸಂಖ್ಯೆಯಲ್ಲಿ ತಲೆ ಎತ್ತುತ್ತಿವೆ. ಕಾರ್ಖಾನೆಗಳು ಸ್ವಯಂ ಚಾಲಿತ ವಾಹನಗಳು ಮತ್ತು ಆಧುನಿಕ ಕೃಷಿ ಚಟುವಟಿಕೆಗಳಿಂದಾಗಿ ಅನೇಕ ಅಪಾಯಕಾರಿ ರಾಸಾಯನಿಕ ಪಾದಾರ್ಥಗಳು, ಧೂಳು, ಹೊಗೆ ಮತ್ತು ವಿಷಪೂರಿತ ಅನಿಲಗಳು ಬಿಡುಗಡೆಯಾ

ಗುತ್ತಿವೆ. ಕಾಳ್ಗಿಚ್ಚುಗಳಿಂದಲೂ ವಾಯುಮಾಲಿನ್ಯ (Air pollution) ಉಂಟಾಗುತ್ತಿದೆ. ವಾಯು ಮಾಲಿನ್ಯದಿಂದ ಮಲೆನಾಡಿನ ಜನರು ಕಲುಷಿತ ಗಾಳಿಯನ್ನು ಸೇವಿಸಬೇಕಾಗಿದೆ. ಇದರಿಂದ ಅನೇಕ ತೀವ್ರತರನಾದ ಗಂಭೀರ ರೋಗಗಳಾದ ಕ್ಯಾನ್ಸರ್, ಅಸ್ತಮಾ, ಬ್ರಾಂಕಿಟೀಸ್ ಇತ್ಯಾದಿಗಳು ಕಾಣಿಸಿಕೊಂಡಿವೆ.

ಜಲಮಾಲಿನ್ಯ:- ಕಾರ್ಖಾನೆಗಳು ನಿರೂಪಯುಕ್ತ ಇಲ್ಲವೇ ಮಲಿನವಾದ ನೀರನ್ನು ಜಲಾಶಯಗಳಿಗೆ ಮತ್ತು ನದಿಗಳಿಗೆ ಬಿಡುತ್ತಿರುವುದರಿಂದ ನೈಸರ್ಗಿಕ ನೀರಿನ ಸಂಪನ್ಮೂಲಗಳಿಗೆ ಸೇರ್ಪಡೆಯಾಗುವ ಅಪಾಯಕಾರಿ ತ್ಯಾಜ್ಯಗಳು ಜಲಮಾಲಿನ್ಯಕ್ಕೆಡೆಮಾಡಿಕೊಟ್ಟಿದೆ. (water pollution). ಇಷ್ಟೇ ಅಲ್ಲದೇ ಚರಂಡಿಗಳ ಕೊಚ್ಚೆ, ಕೃಷಿಯ ತ್ಯಾಜ್ಯ ವಸ್ತುಗಳು ಹಾಗು ತೈಲ ಶುದ್ಧೀಕರಣದ ತ್ಯಾಜ್ಯ ವಸ್ತುಗಳು ನದಿ ಹಾಗೂ ಜಲಾಶಯಗಳಿಗೆ ಸೇರಿ ನೀರನ್ನು ಕಲುಷಿತಗೊಳಿಸಿವೆ. ಅದನ್ನು ಬಳಸಿದ ಮಾನವರಲ್ಲೂ ಅನೇಕ ರೋಗಗಳು ಕಾಣಿಸಿಕೊಂಡಿವೆ. ಪಶು, ಪ್ರಾಣಿ, ಪಕ್ಷಿ ಹಾಗೂ ಜಲಚರಗಳು ಕೂಡ ಈ ತೊಂದರೆಯಿಂದ ಹೊರತಾಗಿಲ್ಲ.

ಪ್ರಾಣಿಗಳ ನಾಶ: - ಮಲೆನಾಡಿನ ಕಾಡು ನಾಶವಾದಂತೆಲ್ಲಾ ಆವಾಸದ ಕೊರತೆಯಿಂದ ನಾಶ ಗೊಳ್ಳುತ್ತಿರುವ ಪ್ರಾಣಿ ಸಮೂಹ ಇಂದು ಬಹುತೇಕವಾಗಿ ಕಂಡುಬರುತ್ತಿವೆ. ಅನೇಕ ಪ್ರಭೇದಗಳಂತೂ ಅಳಿಸಿ ಹೋಗಿವೆ. ಇನ್ನೂ ಕೆಲವು ವಿನಾಶದ ಅಂಚಿನಲ್ಲಿವೆ. ಇಷ್ಟೇ ಅಲ್ಲದೆ ಮಾನವನು ದಂತ, ಚರ್ಮ ಮತ್ತು ಆಹಾರಗಳಿಗಾಗಿ ಪ್ರಾಣಿಗಳನ್ನು ನಾಶಪಡಿಸುತ್ತಿದ್ದಾನೆ. ಇದರಿಂದಾಗಿ ಈ ಹಿಂದೆ ಕಂಡುಬರುತ್ತಿದ್ದ ಪ್ರಾಣಿ, ಪಕ್ಷಿ ಸಂಕುಲಗಳು ಕಣ್ಮರೆಯಾಗಿವೆ. ಮಲೆನಾಡು ತನ್ನ ಅಪಾರ ಜೈವಿಕ ವೈವಿಧ್ಯತೆಯನ್ನು ಇಂದು ಬಹುತೇಕವಾಗಿ ಕಳೆದು ಕೊಂಡಿದೆ.

ಹವಾಮಾನ:- ಮಾನವನು ಪರಿಸರವನ್ನು ಹಾಳುಗೆಡವಿದಂತೆಲ್ಲಾ ಕಾಡು ನಾಶವಾಗಿ ನೀರಿನ ಸಂಪನ್ಮೂಲಗಳು ಬತ್ತಿ, ಹವಾಮಾನದಲ್ಲಿ ಸಹ ಗಣನೀಯ ಬದಲಾವಣೆಗಳುಂಟಾಗಿವೆ. ಬದಲಾದ ಋತುಮಾನ, ಅಕಾಲದ ಮಳೆ, ಗಾಳಿಯಿಂದಾಗಿ ಉಷ್ಣತೆ ಮತ್ತು ಶೀತವಾಯುಗುಣದಲ್ಲಿ ಏರುಪೇರು ಕಂಡುಬಂದಿದೆ. ಇದಕ್ಕೆಲ್ಲಾ ಮೂಲ ಕಾರಣ ಇಲ್ಲಿನ ಜನರ ನಿಸರ್ಗವನ್ನು ಅಲಕ್ಷಿಸಿ ನೆಡೆಯುವ ಚಟುವಟಿಕೆಗಳು.

ಇಲ್ಲಿ ಆಧುನಿಕ ತಂತ್ರಜ್ಞಾನದಿಂದಾಗಿ ಇಂದು ನಾವು ಅಭಿವೃದ್ದಿಯತ್ತ ನೆಡೆಯಲು ಅನುಕೂಲವೆಂದೇ ಅನೇಕರ ಭಾವನೆ. ಆದರೆ ಮಲೆನಾಡಿನಲ್ಲಿ ಕೂಡ ಪಾಶ್ಚಾತ್ಯ ಉತ್ಪಾದನಾ ವಾಣಿಜ್ಯ ವಿಧಾನಗಳನ್ನು ಯತವತ್ತಾಗಿ ಅನುಸರಿಸಿದ್ದರಿಂದ ಅಲ್ಲಿನ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಸರ ಸಮಸ್ಯೆಗಳಿಗೆ ಜನ್ಮ ನೀಡಿದೆ. ವಿದೇಶಿ ಗೋಧಿಯ ಜೊತೆಯಲ್ಲಿ ಆಮದಾಗಿ ನಮ್ಮ ದೇಶದಲ್ಲಿ ಪಸರಿಸಿದ ಪಾರ್ಥೇನಿಯಂ ಕಳೆಯಂತೆ ಈ ವಿದೇಶಿ ತಂತ್ರಜ್ಞಾನಗಳು ಮಲೆನಾಡಿನ ಸೌಂದರ್ಯ, ಜೈವಿಕ ವೈವಿಧ್ಯತೆ

ಮತ್ತು ಸಾಂಸ್ಕೃತಿಕ ಬದುಕನ್ನು ಹಾಳುಗೆಡವ ಹತ್ತಿವೆ. ವಿದೇಶಿ ತಂತ್ರಜ್ಞಾನ ಮತ್ತು ಬಂಡವಾಳದೊಂದಿಗೆ ದೇಶಿಯ ತಂತ್ರಜ್ಞಾನ ಸಹ ಇಲ್ಲಿನ ಪರಿಸರ ನಾಶಕ್ಕೆ ಕೈಜೋಡಿಸಿವೆ. ಅಭಿವೃದ್ಧಿ ಯೋಜನೆಗಳು ಇಲ್ಲಿನ ಪರಿಸರ ಹಾಗೂ ಜನಸಾಮಾನ್ಯರ ಬದುಕನ್ನು ಕದಡದಂತೆ ನಿರ್ಮಾಣಗೊಳ್ಳಬೇಕು ಇಲ್ಲವೇ ರೂಪುಗೊಳ್ಳಬೇಕು. ಕೇವಲ ಕೈಗಾರಿಕೆಗೆ ದೊರೆಯ ಬೇಕಾದ ಮೂಲ ಸವಲತ್ತುಗಳನ್ನು ಹೊಂದಿರುವ ಮಲೆನಾಡು ಹಾಗು ಕರಾವಳಿ ತೀರಪ್ರದೇಶಗಳು ಮಿತಿಮೀರಿ ಬೆಳೆದು ಇಲ್ಲಿನ ಸಾಂಸ್ಕೃತಿಕ ಬದುಕನ್ನು ಉಸಿರುಗಟ್ಟಿಸುವ ದಿನವೂ ದೂರವಿಲ್ಲ. ಸ್ಥಿತ್ಯಂತರಗೊಂಡ ಸಹಜ ಕೃಷಿ ಇಂದಿನ ದಿನಗಳಲ್ಲಿ ಹೀಗೆಯೇ ನಿರ್ಲಕ್ಷಕ್ಕೊಳಗಾದರೆ ಉಪಕಸುಬುಗಳನ್ನು ನಾವು ಪೋಷಿಸದೇ ಇದ್ದರೆ ಅಷ್ಟಾಗಿ ಸಾಮಾಜಿಕ ಹೊಣೆಗಾರಿಕೆ ಇರದ ಯಾಂತ್ರೀಕರಣ ಮತ್ತು ಖಾಸಗೀಕರಣ, ಔದ್ಯೋಗೀಕರಣಗಳು ಮಲೆನಾಡಿನಲ್ಲಿ ಮತ್ತಷ್ಟು ಸಮಸ್ಯೆಗಳನ್ನು ಹುಟ್ಟುಹಾಕುತ್ತವೆ. ಗಾಂಧೀಜಿಯವರ ಆಶಯದಂತೆ ಜನಪರ ಉತ್ಪಾದನೆ (production for the mass). ಆಗಬೇಕೇ ಹೊರತು ವಿದೇಶಿ ಮೂಲದ ಸರಕುಗಳ ಬೃಹತ್ ಉತ್ಪಾದನೆ (Mass production) ಆಗಬಾರದು.

ಸ್ವಾತಂತ್ರ್ಯದ ನಂತರ ಬಡತನ, ನಿರುದ್ಯೋಗ, ಅನಕ್ಷರತೆಯಂತಹ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಅಭಿವೃದ್ಧಿ ಯೋಜನೆಗಳನ್ನು ಜಾರಿಗೊಳಿಸುತ್ತಾ ಬಂದ ಭಾರತ ಸರ್ಕಾರ ಈ ನಿಟ್ಟಿನಲ್ಲಿ ಪಾಶ್ಚಾತ್ಯ ತಂತ್ರಜ್ಞಾನ ಮತ್ತು ಬಂಡವಾಳಗಳನ್ನು ಹೆಚ್ಚಾಗಿ ಆಶ್ರಯಿಸಿದ್ದರಿಂದ ನಮ್ಮ ದೇಶಕ್ಕೂ ಪರಿಸರ ಮಾಲಿನ್ಯವನ್ನು ಆಮದು ಮಾಡಿಕೊಂಡಂತಾಯಿತು. ಮಲೆನಾಡಿನಲ್ಲೂ ಸಹ ಸ್ಥಳೀಯ ತಂತ್ರಜ್ಞಾನವನ್ನು ಪಾಶ್ಚಾತ್ಯ ಮಾದರಿಯಲ್ಲಿ ಸಂಶೋಧನೆಗೊಳಪಡಿಸಿ ಅಭಿವೃದ್ಧಿಪಡಿಸುವಲ್ಲಿ ತೋರಿದ ನಿಷ್ಕಾಳಜಿಯಿಂದಾಗಿ ಇಂದು ಅನೇಕ ತೊಂದರೆಗಳು ಹೆಡೆಯಾಡತೊಡಗಿವೆ. ಅಭಿವೃದ್ಧಿ ಯೋಜನೆಗಳಿಂದಾಗಿ ಪರಿಸರದ ಮೇಲಾದ ನಷ್ಟ ಮಾತ್ರ ಅಂದಾಜು ಮಾಡಲು ಸಾಧ್ಯವಿಲ್ಲ.

ವಿಶ್ವಬ್ಯಾಂಕ್ ನೆಡೆಸಿದ ಇತ್ತೀಚಿನ ಅಧ್ಯಯನ ವರದಿ ಮತ್ತು ಅರಣ್ಯ ಸಚಿವಾಲಯಗಳ ಪ್ರಕಾರ ಪಶ್ಚಿಮ ಘಟ್ಟಗಳಲ್ಲಿ ನಗರಗಳಲ್ಲಿನ ವಾಯುಮಾಲಿನ್ಯದಿಂದ ಜನರ ಆರೋಗ್ಯ ಹದಗೆಟ್ಟು ಅಧಿಕ ನಷ್ಟಕ್ಕೆ ಎಡೆಮಾಡಿಕೊಟ್ಟಿದೆ. ಜಲಮಾಲಿನ್ಯದಿಂದ ಜನರ ಆರೋಗ್ಯ ಹದಗೆಟ್ಟು ಅನೇಕ ಸಾಂಕ್ರಾಮಿಕ ರೋಗಗಳು ಕಾಣಿಸಿಕೊಂಡಿವೆ. ಮಣ್ಣಿನ ಮಾಲಿನ್ಯದಿಂದಾಗಿ ಕೃಷಿ ಹಿನ್ನಡೆಯಾಗಿದ್ದು, ಕೃಷಿ ಭೂಮಿಯ ಗುಣಮಟ್ಟ ಕುಸಿಯುತ್ತಿದೆ. ಜಾನುವಾರುಗಳಿಗೆ ಮೇವು ದೊರಕದ ಸ್ಥಿತಿ ಇಂದು ಮಲೆನಾಡಿನಲ್ಲಿ ಉಂಟಾಗಿದೆಯೆಂದರೆ ನಿಜಕ್ಕೂ ಆತಂಕ ಮೂಡಿಸುತ್ತದೆ. ಅರಣ್ಯ ನಾಶದಿಂದ ಗಿಡಮರಗಳ ಸಂಖ್ಯೆ ಕಡಿಮೆಯಾಗಿದೆ. ಪ್ರವಾಸೋದ್ಯಮದಿಂದಾಗಿ ಆದಾಯ ಇಳಿತಗೊಂಡಿದ್ದು, ಅನೇಕ ತರನಾದ ಪರಿಸರ ಮಾಲಿನ್ಯಗಳು ತಲೆದೋರಿವೆ. ಮಲೆನಾಡಿನಲ್ಲಿ ನವಸಂಸ್ಕೃತಿ ಮಾಲಿನ್ಯವನ್ನು ಸೃಷ್ಟಿಸುತ್ತಿದೆ. ಪರಿಸರ ಮಾಲಿನ್ಯದ ಸಮಸ್ಯೆಗಳು ನಮಗರಿವಿಲ್ಲದಂತೆಯೇ ನವ ವಸಾಹತು ಸಂಸ್ಕೃತಿಯನ್ನಿಲ್ಲಿ ಸೃಷ್ಟಿಸುತ್ತಿವೆ. ಇದರಿಂದಾಗಿ ಇಲ್ಲಿನ ನಿತ್ಯದ ಬದುಕು ಹಿಂದಿನಂತೆ ಇರದೇ ಬದಲಾವಣೆಗೊಂಡಿದೆ.

ಕುವೆಂಪು ಕಾದಂಬರಿಯಲ್ಲಿ ಕೇವಲ ಕೆಲವು ದಶಕಗಳ ಹಿಂದಷ್ಟೇ ಇದ್ದ ಸುಂದರ ಪರಿಸರ ಇಂದು ಇಲ್ಲಿ

ಕಡಿಮೆಯಾಗಿದೆ. ಶುದ್ಧಗಾಳಿ, ನೀರು, ಫಲವತ್ತಾದ ಮಣ್ಣು ಇಂದು ಇಲ್ಲಿ ದೊರೆಯುವುದು ಅಸಾಧ್ಯವೆಂದೇ ಹೇಳಬಹುದು. ಕಾರ್ಖಾನೆಗಳಿಂದ ಹೊರಬರುವ ತ್ಯಾಜ್ಯಗಳು ನದಿ ನೀರಿಗೆ ಸೇರಿ ತುಂಗಭದ್ರಾ ನದಿ ಕಲುಷಿತಗೊಂಡಿದೆ. ಗಣಿಗಾರಿಕೆಯಿಂದ ಜಲಾಶಯಗಳು, ನದಿಗಳು, ಹಳ್ಳಕೊಳ್ಳಗಳು ಮಲಿನಗೊಂಡಿದ್ದು, ಅದನ್ನು ಬಳಸುವ ಇಲ್ಲಿನ ನಾಗರಿಕರಲ್ಲಿ, ಗ್ರಾಮೀಣರಲ್ಲಿ ಮತ್ತು ಬುಡಕಟ್ಟು ಜನಾಂಗದವರಲ್ಲಿ ನೂರೆಂಟು ನವನವೀನ ಕಾಯಿಲೆಗಳನ್ನು ಹುಟ್ಟುಹಾಕಿದೆ. ಅಂದು ಜನಸಂಖ್ಯೆ ತೀರಾ ಕಡಿಮೆಇದ್ದ ಮಲೆನಾಡಿನಲ್ಲಿ ಪದೇ ಪದೇ ಕಾಡುವ ಮಲೇರಿಯಾ ರೋಗ ಮಲೆನಾಡಿನ ಜನರನ್ನು ಸಾವಿನದವಡೆಗೆ ದೂಡುತ್ತಿದ್ದುದ್ದು ಸಾಮಾನ್ಯವಾಗಿತ್ತು. ಆದರೆ ಇಂದು ಬದಲಾದ ಪರಿಸರ ವ್ಯವಸ್ಥೆ ಮತ್ತು ಕೃಷಿ ಪದ್ಧತಿಗಳಿಂದಾಗಿ ಅನೇಕ ಕಾಯಿಲೆಗಳು ಕಾಣಿಸಿಕೊಳ್ಳುವುದರಲ್ಲಿ ಎರಡು ಮಾತಿಲ್ಲ. ಇಂದಿನ ವೇಗದ ಜೀವನ ಪದ್ಧತಿಯಿಂದಾಗಿ ಓಡಾಟಕ್ಕೆ ಹಾಗು ಪ್ರಯಾಣಕ್ಕೆ ವಾಹನಗಳ ಬಳಕೆ, ಕೃಷಿಯಲ್ಲಿ ಯಂತ್ರಗಳ ಬಳಕೆಯಿಂದ ಈ ಮೊದಲು ಶ್ರಮಜೀವಿಗಳಾಗಿದ್ದ ಕೃಷಿಕ ವರ್ಗ ದೈಹಿಕಶಕ್ತಿಯ ಶ್ರಮವಿಲ್ಲದೇ ಅನೇಕ ರೋಗಗಳನ್ನು ಆಹ್ವಾನಿಸಿಕೊಳ್ಳುತ್ತಿದ್ದಾರೆ.ವೇಗದ ಜೀವನ, ಅಪೌಷ್ಟಿಕ ಆಹಾರ ಸೇವನೆ, ರಾಸಾಯನಿಕಗಳನ್ನು ಬಳಸಿ ಬೆಳೆದ ಆಹಾರ ಧಾನ್ಯ, ತರಕಾರಿ, ಹಣ್ಣುಗಳ ಬಳಕೆಯಿಂದಾಗಿ ದೇಹದೊಳಗೆ ನೆಲೆಸುವ ಆಪಾಯಕಾರಿ ರಾಸಾಯನಿಕ ಅಂಶಗಳು ಅನೇಕ ಎಡಪರಿಣಾಮಗಳನ್ನು ಮೂಡಿಸಿವೆ. ಇದರೊಂದಗೆ ದೈಹಿಕ ಶ್ರಮವಿಲ್ಲದ ಮಾನಸಿಕ ಶ್ರಮ ಹೆಚ್ಚಾಗಿರುವ, ಅಧಿಕ ಸಂಭಾವನೆ ದೊರೆಯುವ ಕೆಲಸಗಳಲ್ಲಿ ತೊಡಗಿ ಕೊಂಡಿರುವ ಮಲೆನಾಡಿನ ಜನ ಮಾನಸಿಕ ಒತ್ತಡದಿಂದ ಬಳಲುತ್ತಿದ್ದಾರೆ. ಹಿಂದೆ ಇದ್ದ ಸಾಂಪ್ರದಾಯಿಕ ಪದ್ಧತಿಗಳು, ಕೌಟುಂಬಿಕ ಪದ್ಧತಿ, ಆದ್ಯಾತ್ಮಿಕ ಆಲೋಚನೆಗಳು, ನೈತಿಕತೆ, ಪರಿಸರ ಪ್ರೀತಿ ಇಂದು ಕಂಡುಬರುವುದಿಲ್ಲ. ಹೀಗೆ ಜೈವಿಕ ವೈವಿಧ್ಯಗಳಲ್ಲೆಲ್ಲಾ ಮಿಗಿಲಾದ ಮಾನವ ಸಂಪನ್ಮೂಲ ಇಂದು ತಮ್ಮ ಬದಲಾದ ಬದುಕಿನ ಶೈಲಿಯಿಂದ ತಮ್ಮ ತಲೆಯ ಮೇಲೆ ಕಲ್ಲುಹಾಕಿಕೊಳ್ಳುವಂತಾಗಿದೆ.

ಕೆಲಸಗಳಿಗಾಗಿ ನಗರಗಳಿಗೆ ವಲಸೆ ಹೋಗುವ ಕೃಷಿ ಕಾರ್ಮಿಕರು ತಮ್ಮ ನಿತ್ಯದ ಬದುಕನ್ನು ನಿರ್ಲಕ್ಷಿಸಿ, ನವನಾಗರೀಕತೆಯ ಕೃತಕ ವಿಧಾನವನ್ನು ಅನುಸರಿಸಿ, ಹೋದಸಲುವಾಗಿ ಮಲೆನಾಡಿನ ಹಲವೆಡೆ ಕೃಷಿಗೆ ಕಾರ್ಮಿಕರ ಅಲಭ್ಯತೆಯುಂಟಾಗಿ ಯಂತ್ರಗಳ ಮೇಲೆ ಅವಲಂಬಿತರಾಗಬೇಕಾದ ಪರಿಸ್ಥಿತಿ ನಿರ್ಮಾಣಗೊಂಡಿದೆ. ಮಲೆನಾಡಿನಲ್ಲಿ ಬಡತನ, ಆರೋಗ್ಯ ಸಮಸ್ಯೆ ತಲೆದೋರಿದೆ. ಇದರೊಟ್ಟಿಗೆ ನಿರುದ್ಯೋಗ ಸಮಸ್ಯೆಯು ಕೂಡ ತಾಂಡವವಾಡುತ್ತಿದೆ. ಕೆಲವರು ಸೂಕ್ತ ಉದ್ಯೋಗವನ್ನರಸಿ, ದೂರದ ದೊಡ್ಡ ನಗರಗಳಿಗೆ ಹೋಗುವವರ ಸಂಖ್ಯೆಯೂ ಇಲ್ಲಿ ಕಡಿಮೆ ಇಲ್ಲ. ಮಲೆನಾಡಿನಲ್ಲೇ ನೆಲಸಿ, ತಮ್ಮ ವಿದ್ಯಾರ್ಹತೆಗನುಗುಣವಾಗಿ ಕೃಷಿಯೇತರ ಉದ್ಯೋಗ ಅರಸುವ ಮಂದಿಗೆ ತಮ್ಮ ಯೋಗ್ಯತೆಗನುಸಾರವಾಗಿ ಉದ್ಯೋಗ ದೊರಕದೇ ಮಾನಸಿಕವಾಗಿ ಜರ್ಜರಿತವಾಗಿ ವ್ಯವಸ್ಥೆಗೆ ತಿರುಗಿ ಬೀಳುವಂಥಹ ಸಂದರ್ಭಗಳ ಸೃಷ್ಟಿ ಇಂದಿನ ಮಲೆನಾಡಿನಲ್ಲಿ ಇತ್ತೀಚಿಗೆ ಕಂಡು ಬರುತ್ತಿದೆ. ಮುಂದೊಂದು ದಿನ ಜೀವನವನ್ನು ಪೋಷಿಸುವ ಆಹಾರ ಉತ್ಪಾದನಾ ಕೊರತೆ, ಪರಿಸರನಾಶ,

ಶರವೇಗದಲ್ಲಿ ಬೆಳೆಯುತ್ತಿರುವ ಜನಸಂಖ್ಯೆ, ಅದರಷ್ಟೇ ವೇಗವಾಗಿ ಕುಸಿಯುತ್ತಿರುವ ಪರಿಸರ ಒಂದಕ್ಕೊಂದು ಸೇರಿ ಸ್ಥಳೀಯ ಸಮುದಾಯಗಳ ಮತ್ತು ಬುಡಕಟ್ಟುಗಳ ವಿಘಟನೆಗೋ, ಹಿಂಸಾತ್ಮಕತೆಗೋ ಕಾರಣವಾಗುತ್ತವೆ ಎಂದರೆ ತಪ್ಪಾಗಲಾರದು. ಹೀಗೆ ಬೇರೆ-ಬೇರೆ ಮೂಲದ ವಿವಿಧ ಮುಖಗಳಂತೆ ಇರುವ ಈ ಸಮಸ್ಯೆಯ ಸುಳಿಗಳು ಪ್ರಜಾಪ್ರಭುತ್ವಕ್ಕೆ ಬೆಳವಣಿಗೆಯ ಮಾರ್ಗವನ್ನು ನೀರೂಪಿಸಲಾರದೇ ಬಿಕ್ಕಟ್ಟನ್ನು ತಂದುವೊಡ್ಡಲಿವೆ. ನಕ್ಸಲ್ ಚಟುವಟಿಕೆ ಕೂಡ ಇದರ ಕೂಸೆಂದೇ ಹೇಳಬಹುದು. ಇತ್ತೀಚಿಗೆ ಮಲೆನಾಡಿನಲ್ಲಿ ತಲೆಎತ್ತಿರುವ ನಕ್ಸಲ್ ಚಟುಪಟಿಕೆ ಇಲ್ಲಿನ ಶಾಂತಿಯನ್ನು ಕದಡುವುದರೊಂದಿಗೆ ಪರಿಸರವನ್ನು ಸಹ ಕ್ಷೀಣಗೊಳಿಸುತ್ತಿದೆ. ಕಾಡಿನ ಮಧ್ಯಭಾಗದಲ್ಲಿ ಅಡಗುತಾಣ ನಿರ್ಮಿಸಿಕೊಂಡಿರುವ ನಕ್ಸಲಿಯರನ್ನು ಹಿಡಿಯುವ ಸಲುವಾಗಿಯೋ ಅವರ ಚಟುವಟಿಕೆಗಳನ್ನು ತಡೆಯುವ ಸಲುವಾಗಿಯೋ ಅವರ ಬೆನ್ನಟ್ಟುವ ಪೋಲಿಸರು. ಈ ಸಂಬಂಧಿತ ಕಾರ್ಯಚರಣೆಗಾಗಿ ಮಲೆನಾಡಿನ ಬಹುತೇಕ ಅರಣ್ಯಪ್ರದೇಶ ನಾಶಗೊಳ್ಳುತ್ತಿದ್ದು, ಶಾಂತವಾಗಿದ್ದ ಸುಂದರ ಮಲೆನಾಡಿನಲ್ಲಿ ರಕ್ತದ ಓಕುಳಿಯಾಟ ಪ್ರಾರಂಭವಾಗಿ ವಿವಾದದ ಹುತ್ತದ ಬೆಳವಣಿಗೆಗೆ ಕಾರಣಿಭೂತವಾಗಿದೆ. ಬಂದೂಕದ ಸದ್ದು, ಗುಂಡೆಟಿಗೆ ನೆತ್ತರುಕಾರಿ ಬಲಿಯಾದ ಶವಗಳು ಇಲ್ಲಿನ ಜನತೆಯ ನೆಮ್ಮದಿಯನ್ನು ಕಸಿದುಕೊಂಡು ಸದಾ ಭಯಭೀತರಾಗಿ, ಬದುಕುವಂತೆ ಮಾಡಿವೆ.

ಕುದುರೆಮುಖ ಗಣಿಗಾರಿಕೆಯಿಂದ ತೆರವುಗೊಳಿಸಲ್ಪಟ್ಟ ಗಿರಿಜನರ ಪರವಾಗಿ ಹೋರಾಟ ಆರಂಭಿಸಿದ ಸಂಘಟನೆಯೊಂದು ಈ ರೂಪ ಪಡೆದುಕೊಂಡಿರುವುದು ನಿಜಕ್ಕೂ ಆತಂಕಕಾರಿ.ನಿರುದ್ಯೋಗ ಮತ್ತು ಮಾನವ ಸಂಪನ್ಮೂಲದ ಅಸಮರ್ಪಕ ಬಳಕೆಯಿಂದಾಗಿ ಇಂತಹದೊಂದು ವಾತಾವರಣ ಸಹ್ಯಾದ್ರಿಯ ನಾಡಿನಲ್ಲಿ ನಿರ್ಮಾಣವಾಗುವ ಸಂಭವವಿದೆ.

ಅತ್ಯಂತ ಮಳೆ ಹೆಚ್ಚಾಗಿ ಬೀಳುವ ಪ್ರದೇಶವೆಂದು ದಾಖಲೆಹೊಂದಿದ್ದ ಆಗುಂಬೆ ಹಾಗು ಸುತ್ತಮುತ್ತಲಿನ ಪ್ರದೇಶದಲ್ಲಿ ಮಳೆ ಕ್ಷೀಣಿಸಿದ್ದು, ಮಳೆ ಆಧಾರಿತ ಮಲೆನಾಡಿನ ಕೃಷಿಗೆ ಪೆಟ್ಟುಬೀಳಬಹುದು. ಕಾಲಕ್ಕನುಗುಣವಾಗಿ ಮಳೆಯಾಗದೇ ಮಳೆಮಾರುತಗಳು ಏರುಪೇರಾಗಿ, ಅತಿವೃಷ್ಟಿ ಇಲ್ಲವೇ ಅನಾವೃಷ್ಟಿಗಳಿಗೆ ಕಾರಣವಾಗಿದೆ. ಸೂಕ್ತ ಸಮಯದಲ್ಲಿ ಮಳೆಯಾಗದೇ ಕೃಷಿಕರು ಕಂಗಲಾದರೆ ಮಳೆಯಿಲ್ಲದೇ ಬಿತ್ತಿದ ಬೀಜಗಳು ಮೊಳಕೆಯೊಡೆಯದೆ ಗದ್ದೆಗಳಲ್ಲಿ ಸಸಿಗಳು ಬತ್ತಿಹೋಗಿ, ಕೃಷಿಕರನ್ನು ಹಲವಾರು ಬಾರಿ ಆರ್ಥಿಕ ಸಂಕಷ್ಟಕ್ಕೀಡುಮಾಡಿವೆ. ಮಳೆಯೇ ಕಡಿಮೆ ಆದಮೇಲೆ ಅಂತರ್ಜಲವು ಕಾಲಕ್ರಮೇಣ ಬತ್ತಿಹೋಗಿ ಕುಡಿಯಲು ಶುದ್ದನೀರು ದೊರಕದಂತಹ ಪರಿಸ್ಥಿತಿ ಎದುರಿಸಬೇಕಾಗಬಹುದು. ಬಡರೈತರು ನಿರೀಕ್ಷಿತ ಇಳುವರಿ ದೊರಕದೇ ಆತ್ಮಹತ್ಯೆಗೆ ಶರಣಾಗಬೇಕಾದ ಪರಿಸ್ಥಿತಿ ಮಲೆನಾಡಿನಲ್ಲಿ ಮುಂದೊಂದುದಿನ ಕಾಣಿಸಿಕೊಳ್ಳಬಹುದು.

ಮಳೆ ಕುಂಟಿತಗೊಂಡ ಪ್ರಯುಕ್ತ ಅನೇಕ ಸಸ್ಯಗಳು ತೇವಾಂಶ ಹಾಗು ನೀರಿನ ಕೊರತೆಯಿಂದ ಬತ್ತಿಹೋಗಿವೆ. ಅವುಗಳ ಮೇಲೆ ಆಹಾರಕ್ಕಾಗಿ ಅಥವಾ ವಸತಿಗಾಗಿ ಅವಲಂಬಿತವಾಗಿದ್ದ ಪ್ರಾಣಿ, ಪಕ್ಷಿ ಹಾಗೂ ಕೀಟಸಂಕುಲ ಇಂದು ವಿನಾಶದತ್ತ ಹೆಜ್ಜೆಹಾಕಿವೆ. ಕೆರೆ, ತೊರೆ, ಹಳ್ಳಕೊಳ್ಳ, ನದಿಗಳು

ಬತ್ತುವುದರಿಂದ ಕುಡಿಯುವ ನೀರಿಗಾಗಿ ಆ ನೀರಿನ ನೈಸರ್ಗಿಕ ಮೂಲಗಳನ್ನಾಶ್ರಯಿಸಿದ್ದ ಪ್ರಾಣಿಗಳ ಬದುಕು ದುಸ್ತರವಾಗುತ್ತದೆ. ಅನೇಕ ಪ್ರಾಣಿಗಳು ನೀರು ದೊರಕದೇ ವಿನಾಶಹೊಂದಬಹುದು. ಅವುಗಳನ್ನು ಭೇಟೆಯಾಡಿ ತಿನ್ನುತ್ತಿದ್ದ ಮಾಂಸಹಾರಿ ಪ್ರಾಣಿಗಳಿಗೆ ಸರಿಯಾಗಿ ಆಹಾರ ದೊರಕದೇ ಅವುಗಳ ಸಂತಾನಾಭಿವೃದ್ಧಿ ಗಣನೀಯವಾಗಿ ಕ್ಷೀಣಗೊಂಡಿದ್ದು, ಮಲೆನಾಡಿನ ನೈಸರ್ಗಿಕ ಜೈವಿಕ ವೈವಿಧ್ಯತೆ ಇಂದು ಸಾಕಷ್ಟರ ಮಟ್ಟಿಗೆ ಕಣ್ಮರೆಯಾಗಹತ್ತಿದೆ. ಈ ನಿಟ್ಟಿನಲ್ಲಿ ನಾವು ಗಿಡಗಳನ್ನು ನೆಟ್ಟು, ಕಾಡು ಬೆಳೆಸುವ ಪ್ರಕ್ರಿಯೆ ಮುಂದೊಂದುದಿನ ಅರಣ್ಯದ ಪರಿಕಲ್ಪನೆಯನ್ನೆ ಮೊಟಕಗೊಳಿಸುತ್ತದೆ. ಇದರ ಬದಲು ಮಲೆನಾಡಿನ ನೈಸರ್ಗಿಕ ಅರಣ್ಯವನ್ನು ಉಳಿಸುವ ಕಾರ್ಯ ಇಂದು ನೆಡೆಯಬೇಕಾಗಿದೆ.

ಪಶ್ಚಿಮ ಘಟ್ಟಗಳಲ್ಲಿ ಅಭಿವೃದ್ದಿಯ ಹೆಸರಿನಲ್ಲಿ ತೀವ್ರ ನಗರೀಕರಣ ಹೆದ್ದಾರಿ ನಿರ್ಮಾಣ, ಗಣೀಗಾರಿಕೆ, ಅರಣ್ಯ ಒತ್ತುವರಿ , ಜಲಾಶಯಗಳು ಕಾರ್ಖಾನೆಗಳಿಗೆ ಮೂಲ ವಸ್ತುಗಳನ್ನು ಒದಗಿಸುವ ಸಲುವಾಗಿ ನೆಡೆಸಲಾಗುತ್ತಿರುವ ಅರಣ್ಯನಾಶ, ಆಧುನಿಕ ಕೃಷಿ ಪದ್ದತಿಗಳು, ರಸಾರ್ಟ್‌ಗಳು, ಮಾನೋಕಲ್ಚರ್, ಏಕರೂಪಿ ಪ್ರಾಂಟೆಶನ್‌ಗಳು, ವಿದ್ಯುತ್‌ಸ್ಥಾವರಗಳು, ಕೈಗಾರಿಕೆಗಳು, ಮರುವಸತಿ ಯೋಜನೆಗಳು, ಅವೈಜ್ಞಾನಿಕ ಅಭಿವೃದ್ದಿ ಯೋಜನೆಗಳು ಹೀಗೆ ಹತ್ತು ಹಲವು ಕಾರಣಗಳಿಂದಾಗಿ ಮಲೆನಾಡಿನಲ್ಲಿ ಈ ಮೊದಲು ಕಂಡುಬರುತ್ತಿದ್ದ ಪರಿಸರ ಬಹುತೇಕವಾಗಿ ನಾಶವಾಗತೊಡಗಿದೆ.

ಹಿಂದೆಲ್ಲಾ ಸೂರ್ಯನ ಕಿರಣಗಳು ಒಳಗೆ ನುಸುಳಲು ಅಸಾಧ್ಯವಾದ ದಟ್ಟ ಕಾಡುಗಳನ್ನು ಹೊಂದಿದ್ದ ಕಣ್ಣುಹಾಯಿಸಿದಷ್ಟು ಹರಿವಿಗೂ ಹಸಿರೇ ಹಸಿರಿನಿಂದ ಕಂಗೊಳಿಸುವ ಸಸ್ಯಶ್ಯಾಮಲೆಯನ್ನು ಹೊಂದಿ

ಆಗಸವನ್ನು ಚುಂಬಿಸುವಂತೆ ಎತ್ತರವಾದ ಹಸಿರು ಹೊದಿಕೆಯ ಗಿರಿಶಿಖರಗಳು ಮೊಡದೊಳಗೆ ನುಗ್ಗಿ, ಹಾಲ್ಗಡಲಿನ ಅಥವಾ ಸ್ವರ್ಗದ ಪರಿಕಲ್ಪನೆ ಮೂಡಿಸುವಂತಿದ್ದವು. ಇಲ್ಲಿ ಹುಟ್ಟಿ ಹರಿಯುವ ನೂರಾರು ಝುರಿಗಳು, ನದಿಗಳನ್ನು ಹೊಂದಿದ್ದ ಚಲುವಿನ ರಮ್ಯತಾಣ ನಮ್ಮ ಮಲೆನಾಡು. ಅದರಲ್ಲಿನ ನಿಬಿಡತೆಯಲ್ಲಿ ನಿಶ್ಚಿಂತೆಯಿಂದ ಬದುಕುತ್ತಿದ್ದ ವಿಭಿನ್ನ ಪ್ರಾಣಿ, ಪಕ್ಷಿ. ಕೀಟ ಇತ್ಯಾದಿ ಜೀವಜಂತುಗಳು ಇಂದು ಆಧುನಿಕತೆಯಿಂದಾಗಿ ತತ್ತರಿಸಿಹೋಗಿವೆ. ಕೇವಲ ಐವತ್ತು ದಶಕಗಳ ಹಿಂದೆ ವಿಫುಲವಾಗಿದ್ದ ಈ ಸುಂದರ ಪ್ರಾಕೃತಿಕ ಸಂಪತ್ತು ಇಂದು ಕರಗಹತ್ತಿದೆ. ಅಂತರಾಷ್ಟ್ರೀಯ ಪರಿಸರ ಸಂರಕ್ಷಣಾ ಒಕ್ಕೂಟ ಗುರುತಿಸಿರುವ ವಿಶ್ವದ ಇಪ್ಪತ್ತೈದು ಜೀವ ವೈವಿಧ್ಯ ಸೂಕ್ಷ್ಮ ಪ್ರದೇಶಗಳಲ್ಲಿ ಸಹ್ಯಾದ್ರಿಯು ಒಂದಾಗಿದೆ.

ಸದಾ ಹಸಿರಿನಿಂದ ಕಂಗೊಳಿಸುವ ಮಳೆಕಾಡುಗಳು,ಶೋಲಅರಣ್ಯಗಳು, ಉದುರೆಲೆಕಾಡುಗಳು, ಹುಲ್ಲುಗಾವಲು। ಇವೆಲ್ಲವನ್ನು ತನ್ನಲ್ಲಿ ಅಡಗಿಸಿಕೊಂಡ ಸಹ್ಯಾದ್ರಿಯ ಮಲೆಗಳಲ್ಲಿ ಪರಸ್ಥಿತಿ ಹೀಗೆ ಮುಂದುವರಿದರೆ ಇನ್ನು ಕೆಲವೇ ಕೆಲವು ವರ್ಷಗಳಲ್ಲಿ ನಾವು ಕಣ್ಣುಹಾಯಿಸಿದರೆ, ಏಕರೀತಿಯ ಸಸ್ಯಗಳು, ನೆಡುತೋಪುಗಳು, ಗಣಿಗಾರಿಕೆಯಿಂದ ಬೋಳಾದ

ಗುಡ್ಡಗಳು, ಖಾಲಿ ಕೃಷಿಭೂಮಿ, ಕಾಂಕ್ರೀಟ್ ಕಾಡು, ಬತ್ತಿದ ನದಿಗಳು, ಹೂಳುತುಂಬಿದ ಜಲಾಶಯಗಳು, ಕಸ ಕಡ್ಡಿ ಪ್ಲಾಸ್ಟಿಕ್ ತ್ಯಾಜ್ಯ ಇತ್ಯಾದಿಗಳು ಕಂಡುಬರುತ್ತವೆ. ಮಲೆನಾಡು ಹಿಂದಿನ ಸಸ್ಯ, ಪ್ರಾಣಿ ಸಂಪತ್ತನ್ನು ಬರಿದುಮಾಡಿಕೊಂಡು ಜೀವ ವೈವಿಧ್ಯತೆಯನ್ನೇ ಕಳೆದುಕೊಂಡು ಯಾವುದೇ ವೈಶಿಷ್ಟ್ಯವೂ ಇಲ್ಲದೇ ಖಾಲಿ ಖಜಾನೆಯಂತಾಗುವ ಮೊದಲು ಎಚ್ಚೆತ್ತುಕೊಂಡು ಸಂರಕ್ಷಿಸಿಕೊಳ್ಳದಿದ್ದರೆ, `ಮುಂದಿನ ಪೀಳಿಗೆಗೆ ನಾವು ನೀಡುವ ಕೊಡುಗೆಯಾದರೂ ಏನು`? ಎಂಬುದೇ ಈಗ ನಮ್ಮ ಮುಂದೆ ಇರುವ ಬಿಲಿಯನ್ ಡಾಲರ್ ಪ್ರಶ್ನೆ.

## 9.ಮಲೆನಾಡಿನ ಪರಿಸರ ಸಂರಕ್ಷಣೆಗೆ ಶಿಫಾರಸ್ಸುಗಳು:

ಮಲೆನಾಡಿನ ಪರಿಸರದಲ್ಲಿ ಹಾನಿಗೊಳಗಾಗು ತ್ತಿರುವ ಮಣ್ಣು ಅರಣ್ಯ ಮತ್ತು ನದಿಗಳನ್ನುಕಾಪಾಡಿಕೊಳ್ಳಬೇಕಾಗಿದೆ.

**ಮಣ್ಣಿನ ಸಂರಕ್ಷಣೆ:-** ಹಾನಿಗೊಳಗಾಗುತ್ತಿರುವ ಮಣ್ಣನ್ನು ನಾವು ಕೆಳಕಂಡ ವಿಧಾನಗಳಿಂದ ಸಂರಕ್ಷಿಸಬಹುದು. ನೀರಾವರಿ ಜಲಾಶಯಗಳಿಂದ ಜೌಳುಭೂಮಿಯ ನಿರ್ಮಾಣವಾಗುವುದನ್ನು ತಪ್ಪಿಸಲು ಕ್ರಮಕೈಗೊಳ್ಳಬೇಕು. ಇಂತಹ ಜಲಾಶಯಗಳ ಹೂಳನ್ನು ಆಗಾಗ್ಗೆ ತೆಗೆಯುತ್ತಿರಬೇಕು. ಕೃಷಿ ಮತ್ತು ಸಾಗುವಳಿಯಲ್ಲಿ ರಾಸಾಯನಿಕ ಗೊಬ್ಬರವನ್ನು ಅಧಿಕ ಪ್ರಮಾಣದಲ್ಲಿ ಬಳಸುವ ಬದಲಾಗಿ ಜೈವಿಕ ಗೊಬ್ಬರವನ್ನು ಮತ್ತು ಸಾವಯವಗೊಬ್ಬರವನ್ನು ಹೆಚ್ಚಾಗಿ ಬಳಸಬೇಕು. ಹೊಲಸು ತ್ಯಾಜ್ಯ ವಸ್ತುಗಳನ್ನು ಸೂಕ್ತವಾಗಿ ಸಂಸ್ಕರಿಸಿ, ನಿಗದಿಪಡಿಸಿದ ದೂರ ಸ್ಥಳಗಳಿಗೆ ವರ್ಗಾಹಿಸಬೇಕು. ಕಾಗದ, ಪ್ಲಾಸ್ಟಿಕ್, ಗಾಜು, ರಬ್ಬರ್ ಮೊದಲಾದವುಗಳನ್ನು ಎಲ್ಲೆಂದರಲ್ಲಿ ಬಿಸಾಡದೇ ಮರುಬಳಕೆಗಾಗಿ ಸಂಸ್ಕರಿಸಬೇಕು. ಮಣ್ಣಿನ ಮೇಲೆ ಉಪಯೋಗಿಸಿದ ಲೋಹ, ವಿಷಪೂರಿತ ರಾಸಾಯನಿಕ ತ್ಯಾಜ್ಯ ವಸ್ತುಗಳು ಸಂಗ್ರಹವಾಗಿ ರಾಶಿ ಬೀಳದಂತೆ ನೋಡಿಕೊಳ್ಳಬೇಕು. ಮೇಲ್ಮೈ ಮಣ್ಣು ಗಿಡಮರ ಹುಲ್ಲು ನಾಶದಿಂದ ಸವಕಳಿಯಾಗುತ್ತದೆ. ಅದನ್ನು ತಪ್ಪಿಸಲು ಗಿಡಗಳನ್ನು ನೆಟ್ಟು ಬಳಸಬೇಕು. ಗುಡ್ಡಗಳ ಮೇಲೆ ಹಸಿರು ಹೊದಿಕೆಯಿಂದ, ಇದನ್ನು ತಪ್ಪಿಸಬಹುದು. ಅಕ್ರಮ ಗಣಿಗಾರಿಕೆಯನ್ನು ಮಲೆನಾಡಿನಲ್ಲಿ ತಡೆಹಿಡಿಯಬೇಕು.

**ಅರಣ್ಯ ಸಂರಕ್ಷಣೆ:-** ಮಲೆನಾಡಿನಲ್ಲಿ ಅರಣ್ಯಗಳನ್ನು ಮನುಷ್ಯರು ವಸತಿ, ವ್ಯವಸಾಯಗಳಿಗೆಂದು ಮುಂದಾಲೋಚನೆ ಇಲ್ಲದೆ ಕಡಿದು ನಾಶ ಮಾಡುತ್ತಿದ್ದಾನೆ. ಅರಣ್ಯಗಳು ಕಾಳ್ಗಿಚ್ಚು, ಬಿರುಗಾಳಿ, ಪ್ರವಾಸ, ನೆಲಕುಸಿತ, ರೋಗಗಳು, ಕೀಟಗಳು ಮುಂತಾದವುಗಳಿಂದಲೂ ಹಾಳಾಗುತ್ತಿವೆ. ಕಾಳ್ಗಿಚ್ಚು ಅರಣ್ಯದ ಮೊದಲನೇ ವೈರಿ. ಅರಣ್ಯದಲ್ಲಿ ಎಲ್ಲಿಯಾದರೂ ಬೆಂಕಿ ಹೊತ್ತಿಕೊಂಡಿತೆಂದರೆ ಅದನ್ನು ಶೀಘ್ರವಾಗಿ ನಂದಿಸುವ ಎಲ್ಲಾ ಉಪಾಯಗಳನ್ನು ಕೂಡಲೇ ಕೈಗೊಳ್ಳಬೇಕು. ದನ, ಎಮ್ಮೆ, ಆಡು ಇತ್ಯಾದಿ ಸಾಕುಪ್ರಾಣಿಗಳು ಮರದ ಎಲೆಗಳನ್ನು ತಿಂದು ನಾಶಮಾಡುವವು. ಇದಕ್ಕಾಗಿ ಮರದ ಸುತ್ತ ಬೇಲಿಯನ್ನು ಕಟ್ಟಬೇಕು. ಕ್ರಿಮಿಕೀಟಗಳು ಅರಣ್ಯವನ್ನು ನಾಶಮಾಡುತ್ತವೆ. ಕೆಲವು ಜಾತಿಯ ಮಿಡತೆಗಳು ಗೊಂಡಾರಣ್ಯವನ್ನು ನಾಶಮಾಡಬಲ್ಲವು. ಕೀಟ ನಿಯಂತ್ರಣದಿಂದ ಅರಣ್ಯಗಳನ್ನು ಸಂರಕ್ಷಿಸಬೇಕು. ಹಳೆಯ ಮರಗಳು ನಾಶವಾದ ಮೇಲೆ ಹೊಸ ಗಿಡಗಳನ್ನು ನೆಡುವುದರ ಮೂಲಕ ಅರಣ್ಯವನ್ನು ಸಂರಕ್ಷಿಸಬಹುದು.

**ಜಲಸಂರಕ್ಷಣೆ:-** ಹಳ್ಳಕೊಳ್ಳ, ನದಿಗಳನ್ನು ಪರಿಸರ ಮಾಲಿನ್ಯದಿಂದ ರಕ್ಷಿಸಬೇಕಾದ್ದುದ್ದು ನಮ್ಮ ಆದ್ಯಕರ್ತವ್ಯ.

ಜೀವ ಜಲವನ್ನು ಈ ಕೆಳಕಂಡ ವಿಧಾನಗಳಿಂದ ಕಾಪಾಡಬಹುದು. ಕಾರ್ಖಾನೆಗಳಿಂದ ಕೆರೆ, ನದಿಗಳಿಗೆ ಮತ್ತು ಸಮುದ್ರಗಾಳಿಗೆ ಮಲೀನವಾದ ನೀರನ್ನು ಬಿಡದಂತೆ ಕಾನೂನಿನ ಮೂಲಕ ಪ್ರತಿಬಂಧ ತರಬೇಕು. ಮಲೀನವಾದ ಜಲವನ್ನು ಸಂಸ್ಕರಿಸಿ ಪುನರ್ ಬಳಕೆಮಾಡಬೇಕು.

ಪರಿಶುದ್ದವಾದ ಕುಡಿಯುವ ನೀರಿನ ವ್ಯವಸ್ಥೆಗಾಗಿ ಪ್ರತ್ಯೇಕ ವ್ಯವಸ್ಥೆಯನ್ನು ನೈರ್ಮಲೀಕರಣ ದೃಷ್ಟಿಯಿಂದ ಮಾಡಬೇಕು. ನಗರ ಪ್ರದೇಶಗಳಲ್ಲಿ ಕೊಳಚೆ ಗುಂಡಿಗಳು ಉಂಟಾಗದಂತೆ ನೋಡಿಕೊಳ್ಳಬೇಕು.

ವಸತಿ ಪ್ರದೇಶಗಳಲ್ಲಿ ನೈರ್ಮಲ್ಯವನ್ನು ಕಾಪಾಡುವ ಯೋಜನೆಗಳನ್ನು ರೂಪಿಸಬೇಕು. ಚರಂಡಿಗಳ ನಿರ್ಮಾಣ ವ್ಯವಸ್ಥಿತವಾಗಿರಬೇಕು

.

ಮಲೀನವಾದ ನೀರು ನೀರಿನ ಮೂಲಗಳಿಗೆ ಸೇರದಂತೆ ಎಚ್ಚರಿಕೆ ವಹಿಸಬೇಕು.

ಅಲ್ಲಲ್ಲಿ ಕಸದ ಬುಟ್ಟಿಗಳನ್ನಿಟ್ಟು ಪ್ರತಿದಿನ ತಪ್ಪದೇ ಸಾಗಿಸಿ, ನಗರದಿಂದ ಹೊರಗೆಸಂಸ್ಕರಿಸಬೇಕು.

ಅವುಗಳ ಮೇಲೆ ಕ್ರಿಮಿನಾಶಕಗಳನ್ನು ಸಿಂಪಡಿಸಬೇಕು. ನದಿಗಳು, ಕಾಲುವೆಗಳು ಮತ್ತು ಕೆರೆಗಳಲ್ಲಿನ ನೀರನ್ನು ಜನರು ಮಲೀನ ಮಾಡದಂತೆ ಎಚ್ಚರಿಕೆಯ ಕ್ರಮಗಳನ್ನು ಕೈಗೊಳ್ಳಬೇಕು.

ಜಲಶುದ್ದಿಗಾಗಿ ಪರಿಸರ ಸಚಿವ ಖಾತೆಯ ಭಾರತೀಯ ವಾಣಿಜ್ಯ ಹಾಗು ಕೈಗಾರಿಕಾ ಮಹಾಮಂಡಳಿ ಮತ್ತಿತರ ಹಲವು ಸಂಸ್ಥೆ ಸಂಘಟನೆಗಳ ಮೂಲಕ ಕೈಗಾರಿಕೆಗಳಲ್ಲಿ ಈ ನಿಯಮ ಪಾಲಿಸುವಂತೆ ಯೋಜನೆಗಳನ್ನು ರೂಪಿಸುವಂತೆ ಮನ ವೊಲಿಸುವ ಕೆಲಸ ಮಾಡಬೇಕು.

ಮುಕ್ತಾಯ:

ಕೈಗಾರಿಕೆಗೆ ಹೋಲಿಸಿದರೆ ಕೃಷಿ ಬೆಳವಣಿಗೆಯ ದರ ತೀರಾ ಕಡಿಮೆ. ಇಲ್ಲಿ ಕೃಷಿ ಹೆಚ್ಚಾಗಿ ಮಳೆಯನ್ನೇ ಆಧರಿಸಿರುವುದರಿಂದ ಸುಧಾರಣೆಗಳು ಬೀರಿರುವ ಪ್ರಭಾವವನ್ನು ನಿಖರವಾಗಿ ಹೇಳುವುದು ಕಷ್ಟ. ಆದಾಗ್ಯೂ ಉತ್ಪನ್ನಗಳಲ್ಲಿ ಆಗಿರುವ ಹೆಚ್ಚಳವನ್ನೇ ಗಮನದಲ್ಲಿಟ್ಟುಕೊಂಡು ನೋಡಿದರೆ ಇಲ್ಲಿನ ಕೃಷಿ. ಆಹಾರ ಧಾನ್ಯಗಳ ಉತ್ಪಾದನೆಯಿಂದ ವಾಣಿಜ್ಯ ಬೆಳೆಗಳ ಉತ್ಪಾದನೆಯತ್ತ ತಿರುಗುತ್ತಿದೆ. ಅದೂ ರಪ್ತು ವ್ಯಾಪಾರದ ಅವಶ್ಯಕತೆಗಾಗಿ ಬಹುರಾಷ್ಟ್ರೀಯ ಕಂಪನಿಗಳು ತಾವು ಉತ್ಪಾದಿಸುವ ರಸಗೊಬ್ಬರ, ಕ್ರಿಮಿನಾಶಕ, ಬೀಜಗಳಿಗೆ ಮಾರುಕಟ್ಟೆ ಪಡೆಯಲು ಸ್ಥಳೀಯ ಕೃಷಿ ವಿಧಾನಗಳನ್ನು ಬೀಜಗೊಬ್ಬರಗಳ ಮೇಲಿನ ಅವಲಂಬನೆಯನ್ನು ತನ್ನತ್ತ ಆಕರ್ಷಿಸುತ್ತಿವೆ. ತನಗೆ ಬೇಕಾದ ನಿರ್ದಿಷ್ಟ ವಿದೇಶಿ ತಳಿ ಬೆಳೆಯಲು ರೈತನನ್ನು ಪ್ರಚೋದಿಸಿದೆ " ಹೀಗಾಗಿ ರೋಗ ನಿರೋಧಕ ಶಕ್ತಿ ಹೊಂದಿರುವ, ಸ್ಥಳೀಯ ಮಣ್ಣು, ಗೊಬ್ಬರ, ಹವಮಾನವನ್ನು ಆಧರಿಸಿ ಬೆಳೆಯುವ ತಳಿಗಳು, ಕೃಷಿ ವಿಧಾನ ನಾಶವಾಗುತ್ತಿದೆ. ಸಾಂಪ್ರದಾಯಿಕ ಕೃಷಿಯನ್ನು ವೈಜ್ಞಾನಿಕ ಸಂಶೋಧನೆಗೊಳಪಡಿಸಿ ಅಧಿಕ ಇಳುವರಿ ತೆಗೆಯುವ ಸ್ಥಳೀಯ ಪ್ರಯತ್ನಗಳಿಗೆ ಇದು ಮಾರಕವಾಗಿದೆ.

ಕೃಷಿ ಭೂಮಿಯ ಒಡೆತನಕ್ಕೆ ಸಂಬಂಧಿಸಿದಂತೆ ಮೂಲಭೂತ ಬದಲಾವಣೆಗಳಾಗುತ್ತಿವೆ.

ಭೂಸುಧಾರಣೆ ಕಾನೂನುಗಳ ಸಡಿಲಿಕೆ ಎಂಥ ಪರಿಣಾಮ ಬೀರುತ್ತಿದೆ ಎನ್ನುವುದು ಮಲೆನಾಡಿನಲ್ಲಿ ಕೈಗೊಂಡ ಅಧ್ಯಯನದಿಂದ ಸ್ಪಷ್ಟವಾಗಿದೆ. ಈ ಪ್ರದೇಶದಲ್ಲಿ ಅತಿಸಣ್ಣ ಮತ್ತು ಮಧ್ಯಮ ವರ್ಗದ ಹಿಡುವಳಿದಾರರ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿದೆ. ಆದರೆ ಸಣ್ಣ ಮತ್ತು ದೊಡ್ಡ ಹಿಡುವಳಿದಾರರ ಸಂಖ್ಯೆ ಹೆಚ್ಚಾಗಿದೆ. ಏಕೆಂದರೆ ಅತಿಸಣ್ಣ ರೈತರು ತಮ್ಮ ಕೃಷಿ ಭೂಮಿಯನ್ನು ಲಾಭದಾಯಕ ಬೆಲೆಗೆ ಮಾರಿಕೊಂಡು ಕೃಷಿಕಾರ್ಮಿಕ ವರ್ಗಕ್ಕೆ ಸೇರಿದರೆ ಮಧ್ಯಮ ವರ್ಗದವರು ತಮ್ಮ ಒಂದಿಷ್ಟು ಭೂಮಿಯನ್ನು ಮಾರಿ ಸಣ್ಣ ಹಿಡುವಳಿದಾರರಾಗಿದ್ದಾರೆ. ಈ ಎರಡೂ ವರ್ಗದವರಿಂದ ಭೂಮಿಯನ್ನು ಕೊಂಡವರೆಂದರೆ ದೊಡ್ಡ ಜಮೀನ್ದಾರರು ಮತ್ತು ಸಂಸ್ಥೆಗಳು, ಸಣ್ಣ ರೈತರು ಹೊಟ್ಟೆಪಾಡಿಗಾಗಿ

ಕೃಷಿ ಅವಲಂಬಿಸಿದರೆ ಜಮೀನ್ದಾರರು ಮತ್ತು ಕಂಪನಿಗಳು ಕಂಪನಿ ಮಾದರಿಯ ತೋಟಗಾರಿಕೆಗೆ ಅಥವಾ ಕೃಷಿಯೇತರ ಉಪಯೋಗಕ್ಕಾಗಿ ಕೊಳ್ಳುತ್ತಿದ್ದಾರೆ. ಪ್ರಮುಖ ನಗರಗಳಲ್ಲಿನ ಭೂಮಾಲಿಕರು ಅಲ್ಲಿನ ಕೃಷಿ ಭೂಮಿಯನ್ನು ಅಧಿಕ ಬೆಲೆಗೆ ಮಾರಿ ಸಣ್ಣ ನಗರಗಳ ಸುತ್ತ ಮುತ್ತಲಿನ ಭೂಮಿಯನ್ನು ಕೊಳ್ಳುವ ಕೆಲಸ ಭರದಿಂದ ಸಾಗಿಸಿದ್ದಾರೆ. ಅಂತಿಮವಾಗಿ ಹಳ್ಳಿಯ ರೈತ ತನ್ನ ತುಂಡುಭೂಮಿಯನ್ನು ಮಾರಿ ಕಾರ್ಮಿಕನಾಗುತ್ತಿದ್ದಾನೆ. ಸರ್ಕಾರಿ ಭೂಮಿ. ಅರಣ್ಯದ ಪ್ರದೇಶಗಳು ಈ ಅವಧಿಯಲ್ಲಿ ಕೃಷಿ ಮತ್ತು ಕೃಷಿಯೇತರ ಕಾರಣಗಳಿಗೆ ಬಳಕೆಯಾಗಿವೆ. ಇದು ಪರಿಸರದ ಅಸಮತೋಲನಕ್ಕೂ ಕಾರಣವಾಗುತ್ತಿದೆ.

ಜೀವ ವೈವಿದ್ಯತೆ

ಮನುಷ್ಯ ಜೈವಿಕ ಪರಿಸರದಲ್ಲಿ ಒಂದು ಅಂಶ ಮಾತ್ರ. ಆದರೆ ತನ್ನ ಸ್ವಕೇಂದ್ರಿತ ಬೌದ್ಧಿಕತೆಯಿಂದಾಗಿ ಇಡೀ ಭೂಗೋಲದ ಜೀವ ಜಗತ್ತು ತನ್ನ ಅಮಿಷಗಳನ್ನು ತಣಿಸುವ ಸರಕು ಎಂದು ಭಾವಿಸಿದ್ದಾನೆ. ಯಾವುದರ ಪುನರ್ ಸೃಷ್ಟಿ ತನ್ನಿಂದ ಸಾಧ್ಯವಿಲ್ಲವೋ ಅಂತಹವುಗಳ ಪೂರ್ಣ ವಿನಾಶಕ್ಕೆ ಕಾರಣನಾಗುತ್ತಿದ್ದಾನೆ., ತನ್ನ ಸುಖ ಜೀವನದ ಅವಶ್ಯಕತೆಗಳಿಗಾಗಿ ನೈಸರ್ಗಿಕ ಪರಿಸರವನ್ನು , ಅಲ್ಲಿನ ಸಂಪನ್ಮೂಲಗಳನ್ನು ಬಳಸಿಕೊಳ್ಳುವಾಗ ಮುಂದಿನ ಪೀಳಿಗೆಗೆ ಅದರ ಸದುಪಯೋಗದ ಸಾಧ್ಯತೆಯನ್ನು ನಿರಾಕರಿಸಬಾರದು. ಹಾಗಾಗಿ ನಿರಾಕರಿಸುವುದೂ ಸಹ ಒಂದು ರೀತಿಯ ಭ್ರೂಣಹತ್ಯೆ, ಜೀವ ವೈವಿಧ್ಯಕ್ಕೆ ಸಂಬಂಧಿಸಿದಂತೆ ನಮ್ಮ ಇಂದಿನ ನಡವಳಿಕೆ ಭ್ರೂಣಹತೆಯ ಸ್ವರೂಪದ್ದಾಗಿದೆ. ಕಾಡನ್ನು ಕಡಿದು ಅದರ ಸ್ಥಾನದಲ್ಲಿ ಅಂತಹುದೇ ಮತ್ತೊಂದು ಕಾಡನ್ನು ಅದರ ಎಲ್ಲಾ ವೈವಿದ್ಯತೆಯ ನೈಜತೆಯೋಂದಿಗೆ ಸ್ಥಾಪಿಸುವುದು ಸಾಧ್ಯವಾಗದ ಮಾತು. ಜೈವಿಕ ಪರಿಸರದ ಪ್ರಯೋಜನಗಳನ್ನು ಬಳಸಿಕೊಳ್ಳ ಬೇಕೇ ವಿನಃ ಅದರ ವಿನಾಶಕ್ಕೆ ಕಾರಣವಾಗಬಾರದು. ಮಾನವ ನಿರ್ಮಿತ ಅರಣ್ಯಗಳು ಏಕರೂಪಿ ಕಾಡುಗಳಾಗುತ್ತಿವೆ. ಇವು ಮತ್ತೆ ತಮ್ಮ ಮೂಲ ರೂಪ ಪಡೆಯಲು ಸಾವಿರಾರು ವರ್ಷಗಳೇ ಬೇಕಾಗಬಹುದು. ಅದೂ ನಿಸರ್ಗಕ್ಕೆ ತನ್ನನ್ನು

ತಾನು ಸಮತೋಲನಗೊಳಸುವ ಶಕ್ತಿ ಇದೆ. ಎನ್ನುವ ಮಾತನ್ನು ನಂಬುವುದಾದರೆ ಮಾತ್ರ. ನಾಗರಿಕ ಮಾನವನ ವೈಜ್ಞಾನಿಕ ಅವಿಷ್ಕಾರಗಳಗೆ ಏಕರೂಪಿ ಕಾಡನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ ಹೊರತು ಯಥಾರೂಪಿ ಜೀವ ವೈವಿಧ್ಯವನ್ನಲ್ಲ. ನಿಸರ್ಗದೊಂದಿಗೆ ಸಾಮರಸ್ಯ ಸಾಧಿಸದೆ ಅದರ ವಿರುದ್ದ ದಿಕ್ಕಿನಲ್ಲಿ ವಿಜ್ಞಾನ ಬೆಳೆದದ್ದೇ ಜಾಗತಿಕ ಪರಿಸರ ಸಮಸ್ಯೆಗೆ ಕಾರಣ, ವಿಜ್ಞಾನಿಗಳ, ಅಧಿಕಾರಶಾಹಿಗಳ ಆಲೋಚನೆಗಳು ಗಿಡನೆಡುವುದನ್ನೇ ಅರಣ್ಯ ನಿರ್ಮಾಣ ಎಂದು ವಾಖ್ಯಾನಿಸಿವೆ. ಇದು ಅರಣ್ಯದ ಕಲ್ಪನೆಯನ್ನೇ ಕುಬ್ಜಗೊಳಸಿದೆ. ಇತರೆ ದೇಶಗಳನ್ನೊಳಗೊಂಡಂತೆ ಪಶ್ಚಿಮ ಘಟ್ಟಗಳಲ್ಲಿಯೂ ಸಹ ನೈಸರ್ಗಿಕ ಅರಣ್ಯ ನಾಶವಾಗುತ್ತಿದೆ. ಕೈಗಾರಿಕೆಗಳ ಅವಶ್ಯಕತೆಗಾಗಿ ವಾಣಿಜ್ಯ ಆಸಕ್ತಿಯ ಏಕರೂಪದ ಕಾಡುಗಳು ನಿರ್ಮಾಣವಾಗುತ್ತಿವೆ. ಇದು ಜೈವಿಕ ಸಮತೋಲನವನ್ನು ತಪ್ಪಿಸಿ ಅಸಹಜ ಏಕಸಂಸ್ಕೃತಿಯ ಯಾಂತ್ರಿಕ ಬದುಕನ್ನು ಜಾರಿಗೊಳಸುತ್ತಿದೆ.

ನೈಸರ್ಗಿಕ ವೈವಿಧ್ಯಗಳ ದೃಷ್ಟಿಯಿಂದ ಅತ್ಯಂತ ಶ್ರೀಮಂತವಾಗಿದ್ದ ಮಲೆನಾಡು. ಇಂದು ನಿನ್ನೆ ಮೊನ್ನೆ ಯವರೆಗೆ ದೊರೆಯುತ್ತಿದ್ದ, ಭತ್ತದ ಪ್ರಭೇದಗಳು, ವಿವಿಧ ವೃಕ್ಷ ಜಾತಿಗಳು, ದನ ಕರು, ಎಮ್ಮೆ, ಕೋಣ, ಪಕ್ಷಿ ,ಮೀನು , ಹುಲಿ, ಚಿರತೆ ಮೊದಲಾದ ಹಲವು ಜಾತಿಗಳ ಪ್ರಾಣಿಪಕ್ಷಿ ಮೌಲ್ಯಯುತ ಸಸ್ಯಗಳು, ಬೆಲೆಬಾಳುವ ಮರಗಳು, ಉಪಯೋಗಿ ಕೀಟಗಳು, ಜೀವಾಣುಗಳು ವಿನಾಶದ ಅಂಚಿಗೆ ಬರುತ್ತಿವೆ. ಲಕ್ಷಾಂತರ ವರ್ಷಗಳಂದ ಸಾಧಿಸಿದ ಜೈವಿಕ ಸಮತೋಲನ ತಪ್ಪುವುದರಿಂದ ಕಾಡುಗಳನ್ನಾಶ್ರಯಿಸಿದ ವನ್ಯಜೀವಿಗಳು ಹಳ್ಳಿ –ಪಟ್ಟಣಗಳ ಮೇಲೆ ಲಗ್ಗೆಯಿಡುತ್ತಾ ಜನರ ಮೇಲೆ ತಿರುಗಿ ಬೀಳುತ್ತಿವೆ. ನೆಮ್ಮದಿಗೆ ಭಂಗ ಬಂದಾಗ ಯಾವುದೇ ಜೀವಿ ಕ್ರೂರವಾಗುವುದು ಸಹಜ . ಅಭಯಾರಣ್ಯಗಳ ಗಣಿಗಾರಿಕೆಗಾಗಿ ಸಿಡಿಸುವ ಮದ್ದು, ಅಸ್ತ್ರೇಟಗಳು, ನಿರ್ಮಿಸುವ ಸಾರಿಗೆ ಸಂಪರ್ಕ ಜಾಲ. ಜನಸಂಚಾರ ಅಲ್ಲಿನ ಜೀವಜಂತುಗಳ ಪರಿಸ್ಥಿತಿಗೆ ವಿನಾಶಕ್ಕೆ ಕಾರಣವಾಗುತ್ತಿದೆ. ಬಂಡೆಯೊಡೆಯುವ ಚಟುವಟಿಕೆಗಳನ್ನು ಅಮೇರಿಕಾದಂತಹ ರಾಷ್ಟ್ರಗಳು ನಿಷೇಧಿಸಿರುವುದರಿಂದ ನಮ್ಮ

ಕಾಡುಗಳಲ್ಲಿಯ ಬಂಡೆಯೊಡೆಯುವ ಕೆಲಸಕ್ಕೆ ಅಧಿಕ ಬೇಡಿಕೆ ಉಂಟಾಗಿದೆ. ನೈಸರ್ಗಿಕ ಜೀವಕೋಟಿಯ ಅನುಪಸ್ಥಿತಿಯಲ್ಲಿ ಯಂತ್ರಗಳ ಸಹಾಯದಿಂದ ಮನುಷ್ಯನೊಬ್ಬನ್ನೇ ಭೊಗೋಲದ ಮೇಲೆ ಬದುಕಲು ಸಾಧ್ಯವಿಲ್ಲ.

ಕಳೆದ 50 ವರ್ಷಗಳಲ್ಲಿ ಈ ದೇಶದ ಮೂಲ ಅರಣ್ಯಗಳೂ, ಹುಲ್ಲುಗಾವಲುಗಳೂ ನಾಶಗೊಳ್ಳುತ್ತಾ ಬಂದು ಅವುಗಳ ಸ್ಥಾನದಲ್ಲಿ ಲಂಟಾನ, ಪಾರ್ಥೇನಿಯಂ, ಯುಪಿಟೋರಿಯಂ ಮತ್ತು ಅಂತರಗಂಗೆಗಳಂತಹ ಕಳೆಗಳು ಭೂಮಿಯನ್ನು ಆಕ್ರಮಿಸುತ್ತಿವೆ. ಭಾರತೀಯ ಕೃಷಿ ಸಂಶೋಧನಾ ಸಂಸ್ಥೆಯ ವರದಿಯ ಪ್ರಕಾರ ನಮ್ಮ ರೈತರು 30,000 ಕ್ಕಿಂತ ಹೆಚ್ಚು ಭತ್ತದ ತಳಿಗಳನ್ನು ಬಳಸುತ್ತಿದ್ದು ಉಂಟು. ಭತ್ತವೊಂದರಲ್ಲೇ 1,20,000 ದಷ್ಟು ಪ್ರಭೇದಗಳಿರುವುದು ಗೊತ್ತಾಗಿದೆ. ಹಸಿರು ಕ್ರಾಂತಿಯ ಪರಿಣಾಮವಾಗಿ ಈ ಎಲ್ಲ ಪ್ರಭೇದಗಳು ಕಣ್ಮರೆಯಾಗಿ ಅವುಗಳ ಸ್ಥಾನದಲ್ಲಿ ಅಧಿಕ ಇಳುವರಿಯ , ಅಧಿಕ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳನ್ನು ಬೇಡುವ ತಳಿಗಳು ಜಾರಿಗೊಂಡವು. ಸ್ಥಳೀಯ ತಳಿಗಳು ರೋಗ ನಿರೋಧಕ ಶಕ್ತಿ ಹೊಂದಿ ಕಡಿಮೆ ವೆಚ್ಚದಲ್ಲಿ ಸ್ಥಳೀಯ ಗೊಬ್ಬರ ಆಶ್ರಯಿಸಿ ಬೆಳೆಯುತ್ತಿದ್ದ ಬೀಜಗಳು , ಹಾಲು ಉತ್ಪಾದಿಸುವ ಜಾನುವಾರುಗಳೂ, ಮಾಂಸ, ಉಣ್ಣೆ, ನೀಡುತ್ತಿದ್ದ, ಪ್ರಾಣಿ ಪಕ್ಷಿಗಳ ತಳಿಗಳು ಕ್ಷೀಣಿಸುತ್ತಿವೆ. ಆಮೇರಿಕಾದಂತಹ ಸಾಮ್ರಾಜ್ಯಶಾಹಿ ಪಶ್ಚಿಮ ಘಟ್ಟಗಳ ಜೈವಿಕ ಶ್ರೀಮಂತಿಕೆಯನ್ನು ಸಾಂಪ್ರದಾಯಿಕ ಕೃಷಿ, ಔಷಧಿ ತಂತ್ರಜ್ಞಾನವನ್ನು ಅಲ್ಪಸ್ವಲ್ಪ ಬದಲಾಯಿಸಿ ತನ್ನ ಸ್ವಂತ ಅವಿಷ್ಕಾರಗಳೆಂದು ಪೇಟೆಂಟ್ ಗೊಳಪಡಿಸುತ್ತಿದೆ. ಬೇವು, ಅರಿಸಿನ, ಬಾಸುಮತಿ, ಅಕ್ಕಿ ಮುಂತಾದ ಉತ್ಪನ್ನಗಳಿಗೆ ಸಂಬಂಧಿಸಿದಂತೆ ಪೇಟೆಂಟ್ ಪಡೆಯಲು ಪ್ರಯತ್ನಿಸಿದೆ. ಭಾರತದ ಸ್ಥಳೀಯ ತಳಿಗಳ ಕುರಿತ ಸಂಶೋಧನೆಗಳು ಅಮೇರಿಕಾದಲ್ಲಿ ಗಂಭೀರವಾಗಿ ನಡೆಯುತ್ತಿವೆ. ನಾವು ಜಾಗೃತರಾಗದಿದ್ದಲ್ಲಿ

ಮುಂದೊಂದು ದಿನ ಈಗ ನಮ್ಮಲ್ಲಿರುವ ಸ್ಥಳೀಯ ತಳಿಗಳನ್ನೇ ಅಧಿಕ ಬೆಲೆಕೊಟ್ಟು ಆಮದು ಮಾಡಿಕೊಳ್ಳಬೇಕಾಗಬಹುದು. ಇತರೆ ದೇಶಗಳು ಬೀಜಕ್ಕಾಗಿ ತನ್ನನ್ನೇ ಆಶ್ರಯಿಸಬೇಕೆಂಬ ಧೋರಣೆಯಿಂದ ದವಸದಾನ್ಯಗಳ ಬೀಜಗಳು ಮೊಳಕೆಯೊಡೆಯದಂತೆ ಮಾಡುವ ವಿನಾಶಕಾರಿ ವಂಶವಾಹಿ ತಂತ್ರಜ್ಞಾನವನ್ನು ಅಮೇರಿಕಾ ಅಭಿವೃದ್ಧಿಪಡಿಸಿದೆ. (Terminating Gene Technology ) ಅಂಗಾಂಶ ಕೃಷಿ ತಂತ್ರಜ್ಞಾನದ (Tissue Culture ) ದುರುಪಯೋಗ ಆರಂಭವಾದರೆ ಇಡೀ ಜಗತ್ತಿನಲ್ಲಿ ಏಕರೂಪಿ ಬಣ್ಣ, ಬುದ್ಧಿ, ಸಂಸ್ಕೃತಿ ಹೊಂದಿರುವ ಜೀವಜಗತ್ತು ಸೃಷ್ಟಿಯಾಗಬಹುದು. ಸಹಜ 'ಬೀಜ, ಹೂವು, ಕಾಯಿ, ಹಣ್ಣುಗಳಾಗುವ ನೈಸರ್ಗಿಕ ಕ್ರಿಯೆಗಳು ಕುಂಠಿತವಾಗಬಹುದು. ವೈಜ್ಞಾನಿಕ ಪ್ರಯತ್ನಗಳು ಸಹಜವಾದುದನ್ನು ಅಸಹಜವಾಗಿಸುವ, ಅಸಾಧ್ಯವಾದುದನ್ನು ಸಾಧ್ಯವಾಗಿಸುವ ನಿಟ್ಟಿನಲ್ಲಿ ಸಾಗಿದ್ದು, ಸಣ್ಣ ಅಜಾಗರೂಕತೆಯೋ, ಆಕಸ್ಮಿಕವೋ ಕ್ಷಣಾರ್ಧದಲ್ಲಿ ಇಡೀ ಭೂಗೋಳವನ್ನು ವಿನಾಶಕ್ಕೆ ತಳ್ಳಬಹುದಾದ ಸಾಧ್ಯತೆಗಳು ಸೃಷ್ಟಿಯಾಗುತ್ತಿವೆ.

### ಮಾಲಿನ್ಯ ಸೃಷ್ಟಿಸುತ್ತಿರುವ ನವ ಸಂಸ್ಕೃತಿ

ಇಂದು ಅಧಿಕವಾದ ಮಾನಸಿಕ ಶ್ರಮದಿಂದಾಗಿ ಅನಿವಾರ್ಯವಾಗಿ ಅತೃಪ್ತಿ, ಅಸಹನೆಗಳು ಹೆಚ್ಚಿ ಮಾನಸಿಕ ಒತ್ತಡ ಅಧಿಕವಾಗಬಹುದು. ಈಗಿನ ನಾಗರಿಕರಲ್ಲಿ ನೂರೆಂಟು ನವ ಕಾಯಿಲೆಗಳನ್ನು ಹುಟ್ಟು ಹಾಕಿದೆ. ಒಂದು ಅಂದಾಜಿನ ಪ್ರಕಾರ ನಾಗರಿಕತೆ ಇದೇ ವೇಗದಲ್ಲಿ ಮುಂದುವರಿದರೆ ಮುಂದಿನ ದಶಕಗಳಲ್ಲಿ ಮನೋರೋಗ ತಜ್ಞರಿಗೆ ಹೆಚ್ಚು ಬೇಡಿಕೆ ಸೃಷ್ಟಿಯಾಗಲಿದೆ. ತಿನ್ನುವ ಅನ್ನಕ್ಕಿಂತ ಬಳಸುವ ಔಷಧಿಗಳು, ಉಪಕರಣಗಳೇ, ಜಾಸ್ತಿಯಾಗಲಿವೆ. ದೇಹ, ಮನಸ್ಸು, ಇಂದ್ರಿಯಗಳಿಗೆ ಕವಾಯಿತು ನೀಡುವ ಸಲಹಾ ಸಂಸ್ಥೆಗಳು ಹುಟ್ಟಿಕೊಳ್ಳಲಿವೆ. ಅತಿನಾಗರಿಕತೆಯ ದುಷ್ಪರಿಣಾಮವನ್ನು ತಡೆಯಲು ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಭಾರತೀಯ ಸಾಂಪ್ರದಾಯಿಕ ತಂತ್ರಜ್ಞಾನ , ಕೌಟುಂಬಿಕ ಪದ್ಧತಿ,

ಅಧ್ಯಾತ್ಮಿಕ ಆಲೋಚನೆ. ಗ್ರಾಮೀಣ ವ್ಯವಸ್ಥೆಯ ಬಗ್ಗೆ ಅಧ್ಯಯನ ನಡೆಸುತ್ತಿದ್ದರೆ ನಾವು ಮಾತ್ರ ಪಾಶ್ಚಿಮಾತ್ಯ ರಾಷ್ಟ್ರಗಳು ಬಳಸಿ ಬಿಸಾಕಿದ ಹಳಸಲು ತಂತ್ರಜ್ಞಾನವನ್ನು ಅವಲಂಬಿಸುತ್ತಿರುವುದು ಅಸಮಂಜಸ. ಹಿನ್ನೆಲಯಲ್ಲಿ ನೋಡಿದಾಗ ಕುವೆಂಪು ಕೃತಿಗಳಲ್ಲಿ ದಾಖಲಾಗಿರುವ ಮಲೆನಾಡಿನ ಜೀವಿಪರಿಸರ ಮತ್ತು ಸಸ್ಯಪರಿಸರಗಳು ಕುವೆಂಪು ಚಿತ್ರಿಸಿದಂತೆ ಇಂದು ಉಳಿದಿಲ್ಲ ಎಂದು ತಿಳಿಯುತ್ತದೆ . ಈಗ ಆಗಿರುವ ಅನಾಹುತಗಳನ್ನು ಸರಿಪಡಿಸಿಕೊಳ್ಳಲು ಕುವೆಂಪು ಕೃತಿಗಳು ನಮಗೆ ಪ್ರೇರಣೆ ನೀಡುತ್ತವೆ.

>>>>>>>>>>> <<<<<<<<<<

# ಪರಾಮರ್ಶನ ಗ್ರಂಥಗಳು, ಗ್ರಂಥಋಣ


1. ಮಲೆಗಳಲ್ಲಿ ಮದುಮಗಳು - ಕುವೆಂಪು
2. ಕಾನೂರು ಹೆಗ್ಗಡತಿ - ಕುವೆಂಪು
3. ಮಲೆನಾಡಿನ ಚಿತ್ರಗಳು - ಕುವೆಂಪು
4. ಆಲಿಸಯ್ಯ ಮಲಯ ಕವಿ - ಚಂದ್ರಶೇಖರ ನಂಗಲಿ
5. ಕುವೆಂಪು ಕಾದಂಬರಿಗಳಲ್ಲಿ ಜೈವಿಕ ಜಾಲ - ಚಂದ್ರಶೇಖರ ನಂಗಲಿ
6. ಕುವೆಂಪು ಕಾದಂಬರಿಗಳ ಎರಡು ಅಧ್ಯಯನಗಳು - ಟಿ.ವಿ. ಅಶೋಕ
7. ಜ್ಞಾನ ವಿಜ್ಞಾನ ಕೋಶ - ನವ ಕರ್ನಾಟಕ ಪ್ರಕಾಶನ
8. ಭೋದಿ ವೃಕ್ಷದ ಕೆಳಗೆ - ಜಿ.ಎನ್. ಮಲ್ಲಿಕಾರ್ಜುನ
9. ಶ್ರೀ ಕುವೆಂಪು - ಬೆಂಗಳೂರು ವಿ.ವಿ
10. ಕಾಡು ಕಡಲು - ಡಾ. ಎಲ್.ಸಿ. ಸುಮಿತ್ರ
11. ಜೈವಿಕ ವೈವಿಧ್ಯ - ಹೆಚ್.ಆರ್. ಕೃಷ್ಣಮೂರ್ತಿ
12. ಕಿರಿಯರ ವಿಜ್ಞಾನ ಕೋಶ
13. ಅಣ್ಣನ ನೆನಪುಗಳು - ಪೂರ್ಣ ಚಂದ್ರ ತೇಜಸ್ವಿ
14. ಪಕ್ಷಿ ಕಾಶಿ - ಕುವೆಂಪು
15. ದೇವರು ರುಜುಮಾಡಿದನು - ಕುವೆಂಪು
16. ಸುಭಾಷ್ ಪಾಳೇಕರ್ ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿ - ಸ್ವಾಮಿ ಆನಂದ್. ಆರ್
17. ಎಲ್ಲಪ್ಪರೆಡ್ಡಿ ಆತ್ಮಕಥೆ ''ಹಸಿರು ಹಾದಿ'' - ಸತೀಶ್ ಚಪ್ಪರಿಕೆ
18. ಅಂಬಾರಗುಡ್ಡ ಬಾಣಲೆಯಿಂದ ಬೆಂಕಿಗೆ
19. ಪ್ರಜಾವಾಣಿ - ಕರ್ನಾಟಕ ದರ್ಶನ - ಜಿ.ಟಿ. ಸತ್ಯನಾರಾಯಣ
20. ಸಸ್ಯ ಸಹ್ಯಾದ್ರಿ - ಡಾ. ಮೋಹನ್ ತಲುಕಾಲು ಕೊಪ್ಪ
21. ಪಶ್ಚಿಮಘಟ್ಟದಲ್ಲಿ - ಮನೋಕಲ್ಬರ್ - ಶಿವಾನಂದ ಕಳವೆ

22. Amphibian assemblages in undisturbed and disturbed areas of Kudremukh national park, central Western ghats, India. - S.V. Krishna Murthy
- Cambridge journals online

23. Biodiversity of the Western ghats - An over view - R.J Ranjit Deniels

24. India 2007

25. Manorama year book 2007

http//www. teriin.org/biodiv/hotspot.htm

